

ಶ್ರೀವೆಂಕಟೇಶಾ ಸಲಹು ವೆಂಕಟೇಶಾ
ಭಾವಿಪೆ ಸೇವಕ, ಭವಭಯನಾಶಾ ॥ ಪ ॥

ಸುರಾರಿ ಗಜಗಳೆಂಬ ಗಣಕೆ ಕಂಠೀರವ
ಕರಿರಾಜ ಸಂಕಟಹರ ದೇವಾ
ಪರಮ ಭಾಗವತರ ಸಮಾಜ ಸಂಜೀವನ
ಪುರಹರವರ ಮತ್ತಾ ವೃಕಾಸುರ ಮಥನಾ ॥ 1 ॥

ವನಜಭವ ಸಮೀರರೊಡೆಯ ಶ್ರೀರಮಣ
ಮುನಿ ಹೃದಯೊರಿಯ ಪರಿಪೂರಣ
ಫಣಿವರಶಾಯಿ ಪರಾತ್ಪರ ಅಗಣಿತ
ಗುಣ ಗಂಭೀರ ಸಜ್ಜಗದ ದಾತಾ ॥ 2 ॥

ಶುಕಶೌನಕ ಸನಕಾದಿ ದೇವಮುಷಿ
ಸಕಲಸುರ ಭೂಪರ ರಾಜಾಧಿರಾಜಾ
ಭಕುತರ ವತ್ಸಲ ಬಾದರಾಯಣ ಹರಿ ಹಯ
ಮುಖ ಪ್ರಸನ್ವೆಂಕಟ ಗಿರಿನಿಲಯಾ ॥ 3 ॥

—ಶ್ರೀ ಪ್ರಸನ್ನ ವೆಂಕಟದಾಸರು.




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೭] ಅಕ್ಟೋಬರ್ ೧೯೮೬ [ಸಂಚಿಕೆ ೫


# ವಿಷಯಸೂಚಿ



ಮುಖಚಿತ್ರ : ದುರ್ಗೆ —ಚಿತ್ರ ಕೆ. ಜಗದೀಶ್.

ಹಿಂಬದಿಯಲ್ಲಿ : ರಾತ್ರಿಯಲ್ಲಿ ತಿರುಮಲೆಯ ದೀಪಾಲಂಕಾರ.

ಒಳಗಡೆ : ಬ್ರಹ್ಮೋತ್ಸವದ ರಥೋತ್ಸವ ಹಾಗೂ ಚಕ್ರಸ್ನಾನ.

# ಸಂಪಾದಕೀಯ

ಜಗನ್ಮೂಲ ಯಾವುದು? ಅಸ್ತಿತ್ವವೇನು? ಮೊದಲಾದ ಪ್ರಶ್ನೆಗಳು ಕಾಲದಿಂದ ಕಾಲಕ್ಕೆ ಸರ್ವ ಜನಾಂಗಗಳನ್ನೂ ಕಾಡಿವೆ. ಪ್ರತಿಯೊಂದು ಜನಾಂಗವೂ ಅವರವರ ಕಾಲದ ತರ್ಕ, ಅನುಭವಗಳ ಬೆಳಕಿನಲ್ಲಿ ಈ ಮೂಲದ ಕತ್ತಲೆಯನ್ನು ಭೇದಿಸಲು ಪ್ರಯತ್ನಿಸುತ್ತ ತನ್ನದೇ ಆದ ಉತ್ತರಗಳನ್ನು ಕಂಡುಕೊಂಡಿದೆ. ಇಂದಿಗೀ ಮತವೃಚಿತವೆಂಬುದೇ ಬಹುತೇಕವಾದಗಳ ಮುಖ್ಯ ನೆಲೆಗಟ್ಟು ಎಂದರೂ, ಬಹುಕಾಲದಿಂದ ಮಾನ್ಯವಾದದ್ದು ಸನಾತನಧರ್ಮದ ಸೃಷ್ಟಿ ಮೂಲ ಚಿಂತನೆ. ಅದೆಂದರೆ;

ಆದಿಯೊಳನಾದಿ ಸದ್ವಸ್ತುವಿಮರ್ಶದಖಂಡ
ಗೂಢ ಚೈತನ್ಯಮೇಕಾಕಿಯಾಗಿ
ಏಕತೆಗೆ ಬೇಸತ್ತು ಸಂಗತಿಯ ಸುಖಕೆಳಸಿ
ತಾಂ 'ಬಹುಸ್ಯಾಂ' ಎನ್ನಲಾಯ್ತು ಸೃಷ್ಟಿ. (ಶೃಂಗಾರಮಂಗಳಂ-ಡಿ.ವಿ.ಜಿ.)

ಹೀಗೆ ಒಂದು ಎರಡಾದದ್ದು, ಎರಡು ಹನ್ನೆರಡಾಗಿ, ನೂರಾಗಿ, ಕೋಟಿಯಾಗಿ, ಅನಂತಕೋಟಿಯಾಗಿ ಬೆಳೆದದ್ದೂ ಒಂದು ಮುಖ್ಯ ಸೂತ್ರದಲ್ಲಿ. ಅದೆಂದರೆ ಪುರುಷ ಪ್ರಕೃತಿ ಸೂತ್ರ. ವಿಷ್ಣುವಿಗೆ ಲಕ್ಷ್ಮಿಯಾಗಿ ಹೃದಯಸ್ಥವಾಗಿ, ಬ್ರಹ್ಮನಿಗೆ ಸರಸ್ವತಿಯಾಗಿ ನಾಲಗೆಯನ್ನೇರಿ, ಶಿವನಿಗೆ, ಅರ್ಧ ದೇಹವೇ ಆಗಿ ಎಲ್ಲ ಶಕ್ತಿಗಳನ್ನೂ ಒಳಗೊಂಡ ದುರ್ಗೆಯಾಗಿ, ಕಂಗೊಳಿಸುತ್ತದೆ ಅಥವಾ ಅರಿವಿಗೆ ಬರುತ್ತದೆ.

ಸನಾತನ ಧಾರ್ಮಿಕ ಆಚಾರ ವ್ಯವಹಾರ, ಹಬ್ಬ ಹರಿದಿನಗಳಲ್ಲೂ ಅಷ್ಟೇ. ಪುರುಷ ದೇವರಿಗಿರುವ ಪ್ರಾಧಾನ್ಯವೇ ಸ್ತ್ರೀ ದೈವಕ್ಕೂ ಉಂಟು. ವರಲಕ್ಷ್ಮೀವ್ರತ, ಸರಸ್ವತೀ ಪೂಜೆ, ದುರ್ಗಾಷ್ಟಮಿಗಳಲ್ಲಿ, ಯಜ್ಞ ದಾನ ಮೊದಲಾದ ಧಾರ್ಮಿಕ ಕ್ರಿಯೆಗಳಲ್ಲಿ ಗಾರ್ಹಸ್ಥ್ಯ ಧರ್ಮ ಪ್ರಾಧಾನ್ಯ. ಜೀವನಕ್ಕೆ ಪುರುಷ ಪ್ರಕೃತಿ ಅಥವಾ ಪುರುಷಸ್ತ್ರೀಯರು ಇಬ್ಬರೂ ಆತ್ಯಗತ್ಯ ಎಂಬುದು ಸನಾತನದ ಧರ್ಮದಲ್ಲಿ ಪರಂಪರೆಯಿಂದ ಬಂದದ್ದು. 'ಮಂದಿಯೆರಡೊಂದು ಬಾಳ್'. 'ದ್ವಂದ್ವ ತನ ವೊಳ್ ಜೀವವೊಂದೆನಿಸಬೇಕು', 'ಚಿಂತನೆಗೆ ಒಂದು ಗುರಿ. ಸಾಧನೆಗೆ ಎರಡು ದೇಹ' ವೆಂಬುದು ಸ್ತ್ರೀಪುರುಷರ ಸಮಾನತೆಯ ಮೂಲಸೂತ್ರವಾಗಿ ನಡೆಯಬೇಕು.

ಆದರೆ ಶತಮಾನಗಳ ಕಾಲದ ವಿವಿಧ ಮುಖಗಳ ಒತ್ತಡ. ಹೊಸ ಹೊಸ ಪರಿಸರಗಳ ಪ್ರಭಾವಗಳಿಂದಾಗಿ ಇಂದು ಸ್ತ್ರೀಯನ್ನು ವಿವಿಧ ಕಾರಣಗಳಿಂದ ಹಿಂದೆ ಹಾಕಲಾಗುತ್ತಿದೆ. 'ರಾಮನೊಡನೆ ಸೀತೆ' ಎಂಬುದು ಕಾಡಿಗೆ, ಕಷ್ಟಕ್ಕೆ ಮಾತ್ರ ಅನ್ವಯವಾಗುವಂತಾಗಿದೆ. ಎಂತಲೇ ಎಲ್ಲ ಕಡೆಯಲ್ಲೂ ಅಸಮತೆ, ಅಸ್ವಸ್ಥತೆ ಬೆಳೆಯುತ್ತಿದೆ. ಧರ್ಮಾರ್ಥ ಕಾಮಗಳಲ್ಲಿ ಆಕೆಯನ್ನು ಅತಿಕ್ರಮಿಸದೆ ಮಾತ್ರವಲ್ಲ; ಆಕ್ರಮಿಸದೆಯೂ ನಡೆಯಬೇಕು. ಆಗ ಮಾತ್ರ ಸಮಾಜ ಸುಖದತ್ತ ಸೌಹಾರ್ದದತ್ತ ನಡೆದೀತು.

ಈ ಸಮಾನತೆಯು, ಸಮಸ್ಕಂಧತೆಯು ಸುಮನಸತೆಯ ಅಗತ್ಯ ಇಂದಿನ–ಈ ಹೊತ್ತಿನ–20 ನೇ ಶತಕದ–ಸುಖಕ್ಕಾಗಿ–ನಮ್ಮ ಸುಖಕ್ಕಾಗಿ ಮಾತ್ರವೇ ಅಲ್ಲ; ನಮ್ಮ ಮುಂದಿನ ಅವರ ಮುಂದಿನ ಪೀಳಿಗೆಗಳ ಮಾನಸಿಕ ಸ್ವಾಸ್ಥ್ಯ, ಸಾಮಾಜಿಕ ಆರೋಗ್ಯಕ್ಕಾಗಿಯೂ ಅವಶ್ಯಕ.

ದ್ವಿಧಾ ಕೃತ್ವಾತ್ಮನೋ ದೇಹಂ
ಅರ್ಧೇನ ಪುರುಷೋ ಭವತ್
ಅರ್ಧೇನ ನಾರೀ ತಸ್ಯಾಂ ಸ
ವಿರಾಜ ಮಸೃ ಜತ್ಪ್ರಭುಃ –ಮನುಸ್ಮೃತಿ.

ಪರಂಪರೆಯಿಂದ ಬಂದ ಈ ಜ್ಞಾನದ ಬೆಳಕಿನಲ್ಲಿ ಇಂದನ್ನು ಚೊಕ್ಕಟವಾಗಿಟ್ಟುಕೊಂಡು, ಮುಂದಿನವರಿಗೆ ಈ ಸಮಾನತೆಯ ದೀಪವನ್ನು ತಲುಪಿಸುವ ಶಕ್ತಿಯನ್ನು ಕೊಡಲಿ ಎಂದು ಅಲಮೇಲು ಮಂಗಾಪತಿಯನ್ನು ಬೇಡುವ.

# ವಾರ್ತಾಲಹರಿ

## ಅನ್ನಮಾಚಾರ್ಯ ಪ್ರಾಜೆಕ್ಟ್‌ನ ದ್ವಾದಶಿ ಕಾರ್ಯಕ್ರಮ

ಅನ್ನಮಾಚಾರ್ಯರ ನಿರ್ಯಾಣ ತಿಥಿಯಾದ ಬಹುಳ ದ್ವಾದಶಿಯಂದು ತಿಂಗಳಿಗೊಮ್ಮೆ ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷ ಕಾರ್ಯಕ್ರಮ ನಡೆಸಬೇಕೆಂಬ ತೀರ್ಮಾನದಂತೆ, ಮೊದಲ ಶ್ರಾವಣ ಬಹುಳ ದ್ವಾದಶಿಯಾದ 1–9–86 ರಂದು ತಿ. ತಿ. ದೇ.ಗಳ ಆರ್ಥಿಕ ಸಲಹಾದಾರ ಶ್ರೀ ಟಿ ಕೆ. ಸೇತೂರಾಮನ್ ಅವರ ಅಧ್ಯಕ್ಷತೆಯಲ್ಲಿ ಅನ್ನಮಾಚಾರ್ಯ ಕೃತಿಗಳ ನೃತ್ಯ ರೂಪಕ ನಡೆಯಿತು.

ಖ್ಯಾತ ನೃತ್ಯಗಾರ್ತಿ ಶ್ರೀಮತಿ ಆಲೇಖ್ಯ ಮತ್ತು ಅವರ ವೃಂದದವರಿಂದ ಹೈದರಾಬಾದಿನ ಲಾಸ್ಯಪ್ರಿಯದ ಶ್ರೀಮತಿ ಉಮಾರಾಮಾರಾವ್ ಅವರ ನೇತೃತ್ವದಲ್ಲಿ ನಡೆದ ನೃತ್ಯಪ್ರದರ್ಶನದಲ್ಲಿ ಅನ್ನಮಾಚಾರ್ಯರ ಅಲಮೇಲು ಮಂಗಾದೇವಿ ವಸ್ತುವಾದ – ಏಮಕೋ ಚಿಗುರುಟಧರಮು, ಪಲುಕು ತೇನೆಲ ತಲ್ಲಿ, ಅಲರುಲು ಗುರಿಯಂಗ, ಜಯಲಕ್ಷ್ಮಿ ಶ್ರೀಲಕ್ಷ್ಮಿ-ಮೊದಲಾದ ಕೃತಿಗಳನ್ನು ಧಾರೆಯಂತೆ ಜೋಡಿಸಿ ನಿರೂಪಿಸಲಾಯಿತು.

ತಿ. ತಿ. ದೇ. ಗಳ ಪರವಾಗಿ ಶ್ರೀ ಸೇತೂರಾಮನ್ ಅವರು ಕಲಾವಿದೆಯರನ್ನು ಸನ್ಮಾನಿಸಿದರು. ಸಭೆಯನ್ನು ಸ್ವಾಗತಿಸುತ್ತ, ಪ್ರಾಜೆಕ್ಟ್ ಅಧಿಕಾರಿ ಶ್ರೀ ಮೇಡಸಾನಿ ಮೋಹನ್ ಅವರು– ಅನ್ನಮಾಚಾರ್ಯ ಕೃತಿಗಳು ಸಂಗೀತ ಸಾಹಿತ್ಯ ಪ್ರಾಧಾನ್ಯವಾದವು ಮಾತ್ರವೇ ಅಲ್ಲದೆ, ಭಾವ ಪ್ರಧಾನವಾದವೂ ಹೌದೆಂದು ಹೇಳುತ್ತ ಎಂತಲೇ ನೃತ್ಯದಿಂದ ಈ ಕೃತಿಗಳು ಹೆಚ್ಚು ಅರ್ಥವಾಗುವ ಸಾಧ್ಯತೆಗಳವೆಯೆಂದೂ ತಿಳಿಸಿದರು.

## ಎಸ್. ವಿ. ಡೈರಿಫಾರಂನಲ್ಲಿ ಗೋಕುಲಾಷ್ಟಮಿ ಉತ್ಸವ

ಶ್ರೀ ವೆಂಕಟೇಶ್ವರ ಡೈರಿ ಫಾರಂನಲ್ಲಿ ಗೋಕುಲಾಷ್ಟಮಿ ಉತ್ಸವವನ್ನು ಯಶಸ್ವಿಯಾಗಿ ನಡೆಸಲಾಯಿತು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ದಂಪತಿಗಳು ಪೂರ್ಣ ಕುಂಭದೊಡನೆ ಗೋಮಾತೆಯನ್ನು ಡೈರಿಫಾರಂನ ಶ್ರೀ ಕೃಷ್ಣವಿಗ್ರಹದ ಬಳಿ ಕರೆತಂದು ವೇದೋಕ್ತವಾಗಿ ಪೂಜೆ ನಡೆಸಿದರು.

ನಂತರ ನಡೆದ ಸಭೆಯಲ್ಲಿ ಮಾತನಾಡುತ್ತ ಕಾರ್ಯನಿರ್ವಹಣಾಧಿಕಾರಿಗಳು ಗೋವು ನಿಸ್ವಾರ್ಥ ಸೇವೆಗೆ ಹೆಸರಾದುದೆಂದೂ, ಆದರ್ಶವಾಗಬಲ್ಲದೆಂದೂ ಮಾತನಾಡುತ್ತ ಡೈರಿಫಾರಂ ಹೆಚ್ಚು ಅಭಿವೃದ್ಧಿಯಾಗಲೆಂದು ಹಾರೈಸಿದರು. ಅನ್ನಮಾಚಾರ್ಯ ಪ್ರಾಜೆಕ್ಟ್‌ನ ಶ್ರೀ ಮೇಡಸಾನಿ ಮೋಹನ್ ಮಾತನಾಡುತ್ತ ಶ್ರೀಕೃಷ್ಣ ತತ್ತ್ವವನ್ನು ವಿವರಿಸಿದರು. ಪ್ರಾಜೆಕ್ಟ್‌ನ ಕಲಾವಿದರಿಂದ ನಡೆದ ಸಂಗೀತ ಸಭೆಯಲ್ಲಿ ಶ್ರೀ ಬಾಲಕೃಷ್ಣ ಪ್ರಸಾದರು ತತ್ಸಂಬಂಧಿ ಅನ್ನಮಾಚಾರ್ಯ ಕೃತಿಗಳನ್ನು ಹಾಡಿದರು

1985 ರಲ್ಲಿ ನಡೆದ ಜಾನುವಾರು ಪ್ರದರ್ಶನದಲ್ಲಿ ಡೈರಿಫಾರಂನ ಹದಿನಾಲ್ಕು ಹಸುಗಳು ಭಾಗವಹಿಸಿ, ಪ್ರಶಸ್ತಿ ಪತ್ರ ಹಾಗೂ ರೂ 5000/– ಬಹುಮಾನವನ್ನು ಸ್ವೀಕರಿಸಿದ್ದು; ಆ ಹಣವನ್ನು ಠೇವಣಿಯಾಗಿಟ್ಟು, ಅದರ ಉತ್ಪತ್ತಿಯನ್ನು ಡೈರಿಫಾರಂನ ಉತ್ತಮ ಕೆಲಸಗಾರರಿಗೆ ವಾರ್ಷಿಕ ಬಹುಮಾನ ನೀಡುವ ಯೋಜನೆಯಲ್ಲಿ ಮೊದಲ ಬಾರಿಗೆ ಏಳುಮಂದಿಗೆ ತಲಾ 116 ರೂಗಳ ಬಹುಮಾನಗಳನ್ನು ನೀಡಲಾಯಿತು. ಅವರುಗಳೆಂದರೆ – ಸರ್ವಶ್ರೀ ವೈ. ರಾಮಯ್ಯ, ಬಿ. ಚೆಂಗಲರಾಯಲು, ಬಿ. ವೆಂಕಟೇಶ, ಅಂಬರೀಶ, ಕೆ. ಸುಬ್ರಹ್ಮಣ್ಯಂ, ಓ. ನಾಗಯ್ಯ ಹಾಗೂ ಎ. ಗಂಗಯ್ಯ.

## ಜನಪ್ರಿಯವಾಗುತ್ತಿರುವ ಅನ್ನದಾನ ಯೋಜನೆ

ತಿರುಮಲೆಯ ಯಾತ್ರಿಕರಿಗೆ ಉಚಿತ ಭೋಜನಾವಕಾಶವನ್ನು ಕಲ್ಪಿಸುವ ಉದ್ದೇಶದ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನಯು ದಾನಿಗಳಲ್ಲೂ ಭಕ್ತರಲ್ಲೂ, ದಿನೇ ದಿನೇ ಜನಪ್ರಿಯವಾಗುತ್ತಿದೆ.

ಕಲ್ಕತ್ತೆಯ ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್‌ನವರು ಎರಡನೆಯಬಾರಿಗೆ ಹತ್ತು ಲಕ್ಷ ರೂಗಳ ದಾನ ನೀಡುವಲ್ಲಿ ಈ ಅಂಶ ಹೆಚ್ಚು ಸ್ಪಷ್ಟವಾಗುವುದು. 1986 ರ ಸೆಪ್ಟೆಂಬರ್ 9 ರಂದು ಟ್ರಸ್ಟ್‌ನ ಪರವಾಗಿ ಹತ್ತು ಲಕ್ಷ ರೂಗಳ ಡಿ. ಡಿ. ಯನ್ನು ಕೈಗಾರಿಕೋದ್ಯಮಿ ಶ್ರೀ ಮಹಾವೀರ ಪ್ರಸಾದ ಪೋದ್ದಾರ್ ಅವರು ತಿ.ತಿ ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರಿಗೆ ಒಪ್ಪಿಸಿದರು. 1985 ರ ಸೆಪ್ಟೆಂಬರ್ 11 ರಂದೂ ಹತ್ತು ಲಕ್ಷ ರೂಗಳನ್ನು ಶ್ರೀ ಪೋದ್ದಾರ್ ಅವರು ನಿತ್ಯಾನ್ನದಾನಕ್ಕಾಗಿ ನೀಡಿದ್ದರೆಂಬುದನ್ನು ಇಲ್ಲಿ ಸ್ಮರಿಸಬಹುದು.

ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಹತ್ತು ಲಕ್ಷ ರೂಗಳನ್ನು ನೀಡಿದಲ್ಲಿ ಅಷ್ಟೇ ಮೊತ್ತವನ್ನು ತಿ. ತಿ. ದೇ. ಗಳ ವತಿಯಿಂದ ಕೂಡಿಸಿ ಬ್ಯಾಂಕಿನಲ್ಲಿ ಠೇವಣಿಯಿಟ್ಟು ಬರುವ ಬಡ್ಡಿಯ ಹಣದಿಂದ ದಿನಂಪ್ರತಿ 400 ಮಂದಿಗೆ ತಿರುಮಲೆಯಲ್ಲಿ ಉಚಿತ ಭೋಜನಾವಕಾಶ ಕಲ್ಪಿಸಲಾಗುವುದು. 1985 ರ ಏಪ್ರಿಲ್ 6 ರಂದು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ದಿನಂಪ್ರತಿ 2500 ಮಂದಿಗೆ ಉಚಿತ ಭೋಜನ ನೀಡುವ ಈ ಯೋಜನೆಯನ್ನು ಉದ್ಘಾಟಿಸಿದ್ದರು. ನಂತರ ಈ ಅವಕಾಶವನ್ನು ದಿನಂಪ್ರತಿ 5000 ಮಂದಿಗೇರಿಸಿ ಇದೀಗ ದಿನವೂ ಹತ್ತು ಸಹಸ್ರ ಮಂದಿ ಭೋಜನಾವಕಾಶ ಹೊಂದುತ್ತಿರುವರು.

ಮೊದಲಿಗೆ ಮದರಾಸಿನ ಶ್ರೀ ಎಲ್. ವಿ. ರಾಮಯ್ಯ ಚಾರಿಟೀಸ್‌ನವರು ಹತ್ತು ಲಕ್ಷ ರೂಗಳನ್ನೂ, ಬೊಂಬಾಯಿನ ಶ್ರೀ ಮಾನಸಿಂಗ್‌ಕಾ ಅವರು 20 ಲಕ್ಷ ರೂಗಳನ್ನೂ ನೀಡಿದರು. ನಂತರ ಕಲ್ಕತ್ತೆಯ ಶ್ರೀ ಆರ್. ಪಿ. ಗೋಯಂಕ, ಶ್ರೀ ಈಶ್ವರ ಪ್ರಸಾದ ಪೋದ್ದಾರ್, ಅವರುಗಳೂ, ಬೊಂಬಾಯಿನ ಶ್ರೀನಾಥೂಭಾಯಿ ಅಂಬಾನಿ, ಕಲ್ಕತ್ತೆಯ ಶ್ರೀ ಬಿ. ಎಂ. ಖೈತಾನ್, ಶ್ರೀ ಜಾಲನ್, ಬೊಂಬಾಯಿನ ಶ್ರೀ ಛಬ್ರಿಯಾ ಚಾರಿಟಿ ಟ್ರಸ್ಟ್, ಮದರಾಸಿನ ಶ್ರೀ ರಾಮನಾಥ ಗೋಯಂಕಾ ಅವರುಗಳು ತಲಾ ಹತ್ತು ಲಕ್ಷ ರೂಗಳನ್ನು ನೀಡಿದರು. ಶ್ರೀ ಪೋದ್ದಾರರ ಈಗಿನ ದಾನದೊಡನೆ ಒಟ್ಟು ದಾನ 1 ಕೋಟಿ 10 ಲಕ್ಷ ರೂಗಳನ್ನು ಮುಟ್ಟಿದೆ.

ನಿತ್ಯ ಅನ್ನದಾನ ಯೋಜನೆಯೂ, ನೀಡಲಾಗುತ್ತಿರುವ ಆಹಾರದ ಗುಣಮಟ್ಟವು ಯಾತ್ರಿಕರ ಶ್ಲಾಘನೆಗೆ ಒಳಗಾಗಿದೆ. ಈ ಯೋಜನೆಗೆ ಉದಾರವಾಗಿ ದಾನ ನೀಡಬೇಕೆಂದು ದೇಶ ವಿದೇಶೀ ಸೇವಾ ಸಂಸ್ಥೆ ವ್ಯಕ್ತಿಗಳಲ್ಲಿ ತಿ. ತಿ. ದೇವಸ್ಥಾನಗಳು ಮನವಿ ಮಾಡಿಕೊಳ್ಳುತ್ತಿದೆ.

(39ನೇ ಪುಟ ನೋಡಿ

# ದೇವನೂರು

ಭಾಗವತ ಸಂಪ್ರದಾಯದ ಭಕ್ತಕವಿ ಲಕ್ಷ್ಮೀಶ. ಕುಮಾರವ್ಯಾಸನಾದ ನಾರಣಪ್ಪ 'ವೀರ ನಾರಾಯಣಸ್ವಾಮಿಯ' ಭಕ್ತನಾಗಿ ಕರ್ನಾಟ ಭಾರತ ಕಥಾಮಂಜರಿ'ಯನ್ನು ಕೊಟ್ಟಂತೆ, ಲಕ್ಷ್ಮೀಶ ದೇವನೂರಿನ ಶ್ರೀಲಕ್ಷ್ಮೀಕಾಂತನ ಭಕ್ತನಾಗಿ ಜೈಮಿನಿ ಭಾರತ ನೀಡಿದ. ಆ ಮೂಲಕ ಕನ್ನಡ ಸಾರಸ್ವತ ಪ್ರಪಂಚವನ್ನು ಶ್ರೀಮಂತ ಗೊಳಿಸಿದ. ಹದಿನಾರನೇ ಶತಮಾನದಲ್ಲಿ ಕನ್ನಡ ಸಂಸ್ಕೃತಿ ಧರ್ಮವನ್ನು ಉಜ್ಜೀವನಗೊಳಿಸಿದ. ಕವಿಯ ನೆಲೆ ಚಿಕ್ಕಮಗಳೂರು ಜಿಲ್ಲೆಯ ದೇವ ನೂರು. ಸುರಮ್ಯ ಪ್ರಕೃತಿ ಪರಿಸರದ ಮಧ್ಯೆ ಶಾಂತವಾಗಿ ಬದುಕು ಸಾಗಿಸಲು ಆಸರೆಯಾದ ಈ ಪುಟ್ಟಗ್ರಾಮ ಮಲೆನಾಡ ಸೆರಗಿನಲ್ಲಿದ್ದು ತೆಂಗು, ಕೌಂಗು, ಕದಳಿ, ನಾರಿಕೇಳ, ಚೂತವನ, ಶಾಲಿವನ ಗಳಿಂದ ಆಪ್ಯಾಯಮೆನಿಸುವ ದೃಶ್ಯಗಳನ್ನೊಳ ಗೊಂಡ ರಮಣೀಯ ಸ್ಥಳ. ಇಂಥ ಪರಿಸರ ಕವಿಗೆ ಸ್ಫೂರ್ತಿ ನೀಡಿ ಆ ಪ್ರಕೃತಿಯ ಸೌಂದರ್ಯಾನು ಭವವೇ ಕಾವ್ಯದಲ್ಲಿ ದೃಶ್ಯವತ್ತಾಗಿ ನಿರೂಪಿತವಾ ಗಿದೆ. ಈ ಊರಿನ ನದ, ನದಿ, ತಟಾಕ, ಪರಿಕಾ ಲುವೆ, ಸುತ್ತಿನ ಶಾಲಿವನಗಳು ಇಂದಿಗೂ ಚೇತೋ ಹಾರಿ. ಈ ಪ್ರಕೃತಿಯ ಆನಂದವನ್ನೇ ನಮಗೆ ಕಾವ್ಯದ ಮೂಲಕ ನೀಡಿದ ಕವಿಗೆ ಕರ್ನಾಟ ಕವಿ ಚೂತವನ ಚೈತ್ರನೆಂಬ ಬಿರುದು ಸಾರ್ಥಕವಾ ದುದು. ಇದು ವಿದ್ವತ್ಸಭೆಯಿಂದ ಕವಿಗೆ ಸಂದ ಗೌರವ.

ದೇವನೂರು ಪುಟ್ಟಗ್ರಾಮವಾದರೂ ಐತಿಹಾ ಸಿಕ, ಸಾಂಸ್ಕೃತಿಕ ಮಹತ್ವಪಡೆದಿದೆ. ಈ ಹಳ್ಳಿಯಲ್ಲಿ ಮುುವತ್ತೈದಕ್ಕೂ ಮೇಲ್ಪಟ್ಟು ದೇವಾಲಯಗ ಳಿವೆ. ದಿನನಿತ್ಯ ನೂರಾರು ದೇವರಿಗೆ ಪೂಜೆ ಸಲ್ಲು ತ್ತಿದೆ. ನಾನಾಮತೀಯರಿದ್ದರೂ ಸೌಹಾರ್ದ ಯುತ ಬಾಳ್ವೆನಡೆಸುತ್ತಾ ಮತೀಯ ಧರ್ಮಾಚ ರಣೆಯೊಂದಿಗೆ ಕವಿಯ ಉತ್ಸವ-ಜಾತ್ರೆಗಳನ್ನು ನಡೆಸುತ್ತಿರುವುದು ವೈಶಿಷ್ಟ್ಯ. ಇಲ್ಲಿನ ದೇವಾಲಯ ಗಳೂ ಅನೇಕ ಕಾರಣಗಳಿಂದ ವಿಶಿಷ್ಟವೆನಿಸಿವೆ. ಕವಿದೇಗುಲ ಶ್ರೀಲಕ್ಷ್ಮೀಕಾಂತ ಸ್ವಾಮಿ ಮತ್ತು ರುದ್ರಭಟ್ಟ ಕವಿಯ ಶ್ರೀಸಿದ್ದೇಶ್ವರ ಸ್ವಾಮಿ ದೇವಾ ಲಯಗಳು ಸಾಂಸ್ಕೃತಿಕ ಮಹತ್ತ್ವಹೊಂದಿ ಸಹೃ ದಯರ ಭಕ್ತರ ಯಾತ್ರಾಸ್ಥಳವೆನಿಸಿದೆ. ಭಕ್ತ ರಿಗೆ, ಸಂಶೋಧಕರಿಗೆ ಸಾಹಿತ್ಯಾಸಕ್ತರಿಗೆ ಅವರವರ ಭಾವಕ್ಕೆ ತಕ್ಕ ನೋಟವಿದೆ.

ಶ್ರೀಲಕ್ಷ್ಮೀಕಾಂತ ದೇವಾಲಯ ಸುಮಾರು ಒಂದುವರೆ ಎಕರೆ ವಿಸ್ತೀರ್ಣದಲ್ಲಿ ಕಲ್ಲರಳಿ ಗುಡಿ ಯಾಗಿ ನಿಂತ ವಾಸ್ತುಶಿಲ್ಪವಿಶಿಷ್ಟತೆಯನ್ನುಳ್ಳ ಗುಡಿ. ಹೆಬ್ಬಾಗಿಲಿನಿಂದ ಶ್ರೀ ಸ್ವಾಮಿಯ ದರ್ಶನ ಮಾಡಿದಾಗ ಎರಡೂವರೆ ಅಡಿಯ ಮೂರ್ತಿ ಬಹುದೊಡ್ಡದಾಗಿ ತೋರುತ್ತದೆ. ಇದು ದ್ವಾರಗಳ ತಾಂತ್ರಿಕವ್ಯವಸ್ಥೆಯಿಂದ ಆದದ್ದು. ದೇವಾಲಯದ ಪ್ರಾಕಾರದ ನಡುವೆ ಲಕ್ಷ್ಮೀಕಾಂತ ದೇವಾಲಯ, ಲಕ್ಷ್ಮಿಯಗುಡಿ, ಎಡಭಾಗಕ್ಕೆ ಕವಿ ಕಟ್ಟಿದ ಕಾವ್ಯಮಂಟಪಗಳಿವೆ, ಪ್ರಾಕಾರಕ್ಕೆ ಹೊಂದಿಕೊಂಡಂತೆ ಯಜ್ಞಶಾಲೆ, ತಂಗುಮಂಟಪ ಕೊತಾರಮಂಟಪ ನವರಾತ್ರಿಮಂಟಪಗಳಿವೆ. ದೇವಾಲಯದ ಮಹಾದ್ವಾರ ಹೆಸರಿಗೆ ತಕ್ಕಂತಿದ್ದು, ಎತ್ತರವಾದ ಕಂಬಗಳು ಹಾಗೂ ಹಾಸುಗಲ್ಲುಗಳ ಜೋಡಣೆಯಿಂದ ಭದ್ರದ್ವಾರವೆನಿಸಿದೆ. ಗಡಸು ಗಲ್ಲುಗಳಿಂದ ಭವ್ಯವಾಗಿ ರೂಪುಗೊಂಡ ಇಡೀ ದೇವಾಲಯದ ಕಂಬಗಳೆಲ್ಲಾ ಕೆತ್ತನೆಯ ರೂಪ ಪಡೆದಿವೆ. ಈ ಗುಡಿ ಅರಸೀಕೆರೆಯ ಚಿಕ್ಕ ತಿರುಪತಿ ಶ್ರೀರಂಗಪಟ್ಟಣ ಹಾಗೂ ಮುಳಬಾಗಿಲ ದೇವಾ ಲಯಗಳ ನೆನಪುತರುತ್ತದೆ. ಈಚೆಗೆ ಮಹಾದ್ವಾ ರದ ಮೇಲ್ಗಡೆ ನಿರ್ಮಿಸಲಾದ ಅನಂತಶಯನ ನನ್ನೊಳಗೊಂಡ ವಿಮಾನ ಮಂಟಪವು ಶ್ರೀದೇವಿ ಭೂದೇವಿಯವರೊಡನೆ ಕವಿಲಕ್ಷ್ಮೀಶನನ್ನೂ ಭಕ್ತನನ್ನಾಗಿ ನಿರ್ಮಿಸಲ್ಪಟ್ಟಿದೆ.

ಶ್ರೀಲಕ್ಷ್ಮೀಕಾಂತನ ಮೂಲ ಗುಡಿ ಐದು ವಿಭಾಗಗಳಿಂದ ಕೂಡಿದೆ-ಮುಖ ಮಂಟಪ, ನವ ರಂಗ, ಆಳ್ವಾರ ಮಂಟಪ, ಗರ್ಭಗುಡಿ, ಒಳ ಮಂಟಪ. ಈ ಎಲ್ಲ ಮಂಟಪಗಳ ಕಂಬಗಳೂ ಕಲಾತ್ಮಕವೆನಿಸಿವೆ. ನವರಂಗದಲ್ಲಿ ಶ್ರೀಸ್ವಾಮಿಯ ಉತ್ಸವಮೂರ್ತಿ, ಬಲದಲ್ಲಿ ಕವಿ ಲಕ್ಷ್ಮೀಶನ ಕಮಾನುಮಂಟಪವಿದೆ. ಪದ್ಮಾಸನದಲ್ಲಿ ಕುಳಿ ತಿರುವ ಕವಿಯ ವಿಗ್ರಹ ಧ್ಯಾನಾಸಕ್ತ ಭಂಗಿಯ ಲ್ಲಿದೆ. ದ್ವಾರದ ಎಡ-ಬಲಮಗ್ಗುಲ ಗೋಡೆಗಳಲ್ಲಿ ಜೈಮಿನಿ ಭಾರತ ಕಥೆಯ ಭಾಗವಾದ ಸುಧನ್ವ ನನ್ನು ಎಣ್ಣೆ ಕೊಪ್ಪರಿಗೆಗೆ ಹಾಕುತ್ತಿರುವ ಚಿತ್ರವೂ ಮತ್ತೊಂದು ಕಡೆ ಮಯೂರ ಧ್ವಜನ ಮಗ ತಾಮ್ರ ಧ್ವಜ ನರ-ನಾರಾಯಣರ ರಥವನ್ನು ಎತ್ತಿ ಎಸೆಯುತ್ತಿರುವ ತೈಲವರ್ಣಚಿತ್ರವೂ ರೋಮಾಂ ಚನಗೊಳಿಸುತ್ತವೆ.



ದೇವನೂರು ಲಕ್ಷ್ಮೀಕಾಂತಸ್ವಾಮಿ ದೇವಾಲಯ,

ಚಿತ್ರಲೇಖನ :

**ಶ್ರೀ ದೇವನೂರು ಪಾಂಡುರಂಗ**

ಗರ್ಭಗುಡಿಯ ಎದುರು ಕೋಣೆಯಲ್ಲಿ ತನ್ನೆ ರೆಡು ಆಳ್ವಾರರ ವಿಗ್ರಹಗಳಿವೆ. ಇವುಗಳ ಜೊತೆಯಲ್ಲೇ ಅನಂತನಾರಾಯಣ, ರಾಮಾನುಜಾಚಾರ್ಯ, ದೇಶಿಕ, ನಿಷ್ಕಳಂಕಸ್ವಾಮಿಗಳ ವಿಗ್ರಹಗಳು ಕಲಾತ್ಮಕವೆನಿಸಿವೆ. ವೈಶಿಷ್ಟ್ಯವೆಂದರೆ ಕವಿಯ ಭಾಗವತ ಸಂಪ್ರದಾಯಕ್ಕೆ ತಕ್ಕಂತೆ ಶಿವನ ಮುಖಾಭರಣವೂ ದಿನ ನಿತ್ಯವೂ ಪೂಜೆಗೊಳ್ಳುತ್ತಿದೆ. ಲಕ್ಷ್ಮೀಕಾಂತನ ಮೂಲ ವಿಗ್ರಹ ಶ್ರೇಷ್ಠ ಸಾಲಿಗ್ರಾಮ ಶಿಲೆಯಿಂದ ನಿರ್ಮಿತವಾದುದು. ಇದನ್ನು ಪಾಂಡವರು ಪ್ರತಿಷ್ಠಾಪಿಸಿದ್ದೆಂಬ ಐತಿಹ್ಯ ಸ್ಥಳ ಪುರಾಣವಾಗಿ ರೂಢಿಯಲ್ಲಿದೆ. ಈ ಮೂರ್ತಿ ನಖ-ಶಿಖ ಪರ್ಯಂತ ಅಲಂಕೃತವಾಗಿದ್ದು ಆಧುನಿಕ ಆಭರಣಗಳನ್ನು ನಾಚಿಸುವಂತಿದ್ದು ಕಣ್ಮನಗಳಿಗೆ ಮುದವೀಯುತ್ತದೆ. ಮೂರ್ತಿಯ ಕೆಳಗೆ ಎಡಬಲಗಳಲ್ಲಿ ಚಾಮರವಿಕ್ಕುತ್ತಿರುವ ಪುಟ್ಟ ಸ್ತ್ರೀ ವಿಗ್ರಹಗಳು ಸುಂದರವೆನಿಸಿವೆ. ಈ ಮೂಲ ಗುಡಿಯ ಬಲಭಾಗಕ್ಕೆ ಲಕ್ಷ್ಮೀದೇವಿಯ ವಿಗ್ರಹ ಕರಿಶಿಲೆಯಿಂದ ನಿರ್ಮಿತವಾಗಿದ್ದು, ಅಭಯ, ವರದ ಹಸ್ತಗಳನ್ನೊಳಗೊಂಡ ಎರಡೂವರೆಯಡಿಯ ವಿಗ್ರಹ ಭಕ್ತಿ ಶಾಂತ ಭಾವಗಳಿಂದ ತನ್ಮಯಗೊಳಿಸಿ ಮುದ ನೀಡುತ್ತದೆ.

## ಕಾವ್ಯ ಸ್ಫೂರ್ತಿಯ ತಾಣ ಕಾವ್ಯಮಂಟಪ

ಶ್ರೀಲಕ್ಷ್ಮೀಕಾಂತನ ಎಡ ಮಗ್ಗುಲಿಗೆ ಇತಿಹಾಸಿಕ ಖ್ಯಾತಿ ಪಡೆದ ಕಾವ್ಯಮಂಟಪ. ಶಿಲ್ಪ ಕಲೆಯಿಂದಲ್ಲವಾದರೂ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಪರಿವೇಶವನ್ನುಳ್ಳದ್ದು. ಕುಮಾರ ವ್ಯಾಸನಂತೆ ಲಕ್ಷ್ಮೀಶನೂ ಒದ್ದೆಮಡಿಯಲ್ಲಿ ಕಾವ್ಯ ರಚಿಸುತ್ತಿದ್ದವನು. ಪ್ರತಿಭೆಸ್ಫೂರ್ತಿ ನೀಡುವಾಗಲೇ ದೈವಕ್ಕೆ ತನ್ನ ಭಕ್ತಿಯ ಕಾವ್ಯ ಕುಸುಮಗಳನ್ನು ಸೃಷ್ಟಿಸಿ ಅರ್ಚಿಸುತ್ತಿದ್ದನು. ಈ ಮಂಟಪದ ಮುಂಭಾಗ ಆರು ಅಂಕಣಗಳಿಂದ ವಿಶಾಲವಾಗಿ ನಿರ್ಮಾಣಗೊಂಡಿರುವ ಕಲ್ಲುಮಂಟಪ. ಈ ಮಂಟಪ ಹಿಂದಿನವರ ಭಕ್ತಿಸಾಹಸಗಳ ಪ್ರತೀಕ. ಮೇಲ್ಗಡೆಯ ಮಂಟಪದಲ್ಲಿ ಕವಿಯ ಸ್ಮಾರಕವಿದೆ. ಅವರ ಆಶ್ರಯಕ್ಕದ ಅಂಕಣದ ಕಲ್ಲು ಕಂಬಗಳಲ್ಲಿ ಕಾವ್ಯಕ್ಕೆ ಸಂಬಂಧಿಸಿದ ಸರ್ವಧರ್ಮಸಮನ್ವಯತೆಯನ್ನು ಸಾರುವ ವಿಗ್ರಹಗಳು, ಭಾರತ ಕಥೆಯ ಸನ್ನಿವೇಶಗಳು ಜೈಮಿನಿ ಕಥೆಯ ಚಿತ್ರಗಳು ನಮ್ಮಲ್ಲಿ ಕುತೂಹಲವನ್ನುಂಟು ಮಾಡುತ್ತವೆ. ಇತರತ್ರ ಮುಖ್ಯವಾದವು ಶಂಕರ, ರಾಮಾನುಜ, ಕಬೀರ, ನಾನಕರ ವಿಗ್ರಹಗಳು. ಹಿಂದಿನ ಕಂಬಗಳಲ್ಲಿ ದಶಾವತಾರಗಳು, ಮತ್ಸ್ಯಯಂತ್ರ ಛೇದನ, ನವನೀತ ಚೋರ, ಮಧ್ಯ ಕಂಬದಲ್ಲಿ ಅಶ್ವಮೇಧದ ಸಂಕೇತ, ಸಲಕ್ಷಣ ಯಜ್ಞಾಶ್ವ-ಹೀಗೆ ಈ ಮಂಟಪ ಸಾಹಿತ್ಯಾಸಕ್ತ ಸಂಶೋಧಕರಿಗೆ ಆಹ್ವಾನ ನೀಡುವತಾಣ. ಇದರ ಜೀರ್ಣೋದ್ಧಾರ, ಕವಿಗೆ ನಾವು ಸಲ್ಲಿಸಬೇಕಾದ ಗೌರವವಾಗಿ ಉಳಿದಿದೆ.

## ರುದ್ರಭಟ್ಟನ ಸಿದ್ಧೇಶ್ವರ ದೇಗುಲ

ಚೋಳರ ಕಾಲದಲ್ಲಿ ನಿರ್ಮಿತವಾದ ಈ ದೇವಾಲಯದಲ್ಲಿ ಶಿವನು ಲಿಂಗರೂಪದಲ್ಲಿದ್ದಾನೆ. ಹನ್ನೆರಡನೇ ಶತಮಾನದಲ್ಲಿದ್ದ ಮಹಾಪಂಡಿತ ಪ್ರೌಢ ಕವಿ ರುದ್ರಭಟ್ಟನ ಆರಾಧ್ಯನಿವನೇ ಇದು. ಈ ಕವಿ 'ಜಗನ್ನಾಥ ವಿಜಯ'ದಲ್ಲಿ ಭಾಗವತದ ಕಥೆಯನ್ನು

ಭಗವಂತನ ಲೀಲಾ ವಿನೋದವೆನಿಸಿದ್ದಾನೆ. ಇದನ್ನೇ ಕನ್ನಡದಲ್ಲಿ ಚಂಪೂ ಛಂದಸ್ಸಿನಲ್ಲಿ ರಚಿಸಿ ಪಂಡಿತವರೇಣ್ಯನೆನಿಸಿದ. ಈ ಕಾವ್ಯ ಸಂಸ್ಕೃತ ಭೂಯಿಷ್ಠವೆನಿಸಿದ ವಿಸರ್ಗ ಕೃತಿ. ಈ ಕವಿ ದ್ವಾರಸಮುದ್ರದ ವೀರಬಲ್ಲಾಳನ ಮಂತ್ರಿ ಚಂದ್ರಮೌಳಿಯಲ್ಲಿ ಪಂಡಿತ ಕವಿಯಾಗಿದ್ದನು. ಪರಮ ಶಿವಭಕ್ತನಾದರೂ ಕೃಷ್ಣ ಪಾರಮ್ಯವನ್ನು ಎತ್ತಿ ಹಿಡಿದು ಭಾಗವತ ಸಂಪ್ರದಾಯವನ್ನು ಬೆಳೆಸಿದನು. ನಂತರ ಲಕ್ಷ್ಮೀಶ, ಕುಮಾರವ್ಯಾಸರು ಈ ಸಂಪ್ರದಾಯವನ್ನು ಮುಂದುವರಿಸಿದರು. ಚಿಕ್ಕ ಚೊಕ್ಕವಾದ ಈ ಗುಡಿಯಲ್ಲಿ ಬೇಲೂರು ದೇವಾಲಯದ ಶಿಲಾವಿಗ್ರಹಗಳನ್ನು ಹೋಲುವಂಥ ದೇವತಾ ವಿಗ್ರಹಗಳು ಕಲಾತ್ಮಕವಾಗಿದ್ದು, ಕುಸುರಿ ಕೆಲಸದಿಂದ ಆಕರ್ಷಕವೆನಿಸಿವೆ. ಮಹಿಷಾಸುರ ಮರ್ದಿನಿ, ಸುಬ್ರಹ್ಮಣ್ಯ, ಚೆನ್ನ ಕೇಶವ, ಕಾಲಭೈರವ, ಆದಿಶೇಷ, ಸೂರ್ಯನಾರಾಯಣ, ಕೈಲಾಸ ಶಂಕರ, ಸಪ್ತಮಾತೃಕೆಯರು, ಗಣಪತಿ, ರುದ್ರಭಟ್ಟನ ವಿಗ್ರಹ, ಶಿವಲಿಂಗ ಹಾಗೂ ಬಸವ ರಮಣೀಯವೆನಿಸಿವೆ. ಜಗನ್ನಾಥ ವಿಜಯದ ಪಠಣ, ಕವಿಜಯಂತಿ ಹಾಗೂ ವಿಶೇಷದಿನಗಳಲ್ಲಿ ನಡೆಯುತ್ತದೆ. ಈರ್ವರು ಕವಿಗಳ ಕಾವ್ಯದ ಕಥೆಯೂ ಗಮಕ ವಾಚನದ ಮೂಲಕ ನಡೆಯುತ್ತದೆ. ಕಾವ್ಯದ ದೃಷ್ಟಿಯಿಂದ ಎರಡು ಉತ್ತುಂಗ ಕೃತಿಗಳ ಸೃಷ್ಟಿಗೆ ಆಶ್ರಯವಾಗಿದ್ದ ಈ ಹಳ್ಳಿ ಸಾಂಸ್ಕೃತಿಕವಾಗಿ ಒಂದು ಕಾಲದಲ್ಲಿ ಮೆರೆದು ಪ್ರಸಿದ್ಧವಾಗಿದೆ. ಹಳ್ಳಿಗರು ಕವಿ ನಮ್ಮೂರಿನವನೆಂದು ಹೆಮ್ಮೆಯಿಂದ ಹೇಳಿಕೊಳ್ಳುವುದಲ್ಲದೆ ಪ್ರತಿದಿನವೂ ಜೈಮಿನಿವಾಚನ, ಕವಿಗೆ ಶುಭಕಾರ್ಯದಲ್ಲಿ ಗೌರವ ವೀಳ್ಯ, ಮಕ್ಕಳಿಗೆ ಕವಿಯ ನಾಮಾಂಕಿತ, ಕವಿಯ ಉತ್ಸವ, ರಥೋತ್ಸವ, ಗಮಕಸ್ಪರ್ಧೆ ನಾಟಕ ಮುಂತಾಗಿ ಅಭಿಮಾನದಿಂದ ಕವಿಯನ್ನು ಗೌರವಿಸುತ್ತಾರೆ. ಇಷ್ಟಾಗಿಯೂ ಇನ್ನೂ ಇದು ಪ್ರವಾಸೀ ಕೇಂದ್ರವೆನಿಸಬೇಕು. ಕವಿಯ ಊರು ಸುರಪುರದ ಸಮೀಪದ ದೇವಪುರವಲ್ಲ, ಚಿಕ್ಕಮಗಳೂರಿನ ದೇವನೂರೆಂದು ಜನಕ್ಕೆ ಸಂಶೋಧಕರು ಕ್ಷೇತ್ರಕಾರ್ಯದ ಮೂಲಕ ತಿಳಿಸಬೇಕಾಗಿದೆ. ಕವಿಯ ಕೀರ್ತಿ ಮತ್ತಷ್ಟು ಹರಡಬೇಕು.

## ಕವಿ ಮತ್ತು ಕಾವ್ಯ

ಭಾಗವತ ಸಂಪ್ರದಾಯಿಗಳಾದ ಈರ್ವರು ಕವಿಗಳೂ ಶಿವ ಹಾಗೂ ವಿಷ್ಣು ಪಾರಮ್ಯವನ್ನು ಸಾರಿ ಧಾರ್ಮಿಕ ಸಹಿಷ್ಣುತೆಯ ಮಾರ್ಗದರ್ಶಿಗಳೆನಿಸಿದ್ದಾರೆ. ಜೈಮಿನಿ ಭಾರತದಿಂದ ಖ್ಯಾತಿವೆತ್ತ ಲಕ್ಷ್ಮೀಶ ಸ್ವವಿಷಯವಾಗಿ ಕೊಚ್ಚಿಕೊಳ್ಳದೇ "ತಾನು ಭರದ್ವಾಜ ಗೊತ್ರದವನೂ ಅಣ್ಣಮಾಂಕನ ಸುತನೂ, ಕರ್ನಾಟ ಕವಿಚೂತವನ ಚೈತ್ರನೂ ಆದ ಲಕ್ಷ್ಮೀಶ ನೆಂಬುವ" ಕಾವ್ಯ ರಚಿಸಿದೆನೆಂದು ಕಿಂಚಿತ್ ಪರಿಚಯಿಸಿಕೊಂಡಿದ್ದಾನೆ. ಹೀಗಾಗಿ ಈತನ ಕಾಲ ದೇಶಗಳು ಚರ್ಚಾಸ್ಪದವಾದವು. ವಿದ್ವಾಂಸರ ಅಭಿಮತ ಕಾವ್ಯಾಧಾರ ಸಮನ್ವಿತವಾಗಿ ಲಕ್ಷ್ಮೀಶನ ದೇವನೂರು ಜನ್ಮ-ಜನಿತನಾಯಿತು. ಈತ ದೇವನೂರನ್ನು ಸುರಪುರ, ದೇವಪುರ, ಅಮರಪುರ, ಗೀರ್ವಾಣಪುರ, ದಿವಿಜಪುರ, ಲಕ್ಷ್ಮೀಪುರ, ದೇವನಗರಿ, ದೇವನೂರು ಮುಂತಾಗಿ ಹಾಡುತ್ತಾನೆ. ಲಕ್ಷ್ಮೀರಮಣನನ್ನು ಕಾವ್ಯದಲ್ಲಿ ಅಡಿಗಡಿಗೆ ಸ್ತುತಿಸುತ್ತಾನೆ.

ಸಂಸ್ಕೃತ ಕವಿ ಜೈಮಿನಿಯಿಂದ ರಚಿತವಾದ ಭಾರತವನ್ನು ಆಕರವಾಗಿರಿಸಿಕೊಂಡು ಸ್ವತಂತ್ರವೆನಿಸುವ, ಕಲ್ಪನಾಯುಕ್ತವಾದ ಸುಂದರವಾದ ಕನ್ನಡ ಜೈಮಿನಿ ಭಾರತವನ್ನು ಈತ ರಚಿಸಿದ. ಕಾವ್ಯದಲ್ಲಿ ಉಪಮೆ, ರೂಪಕ, ದೀಪಕ, ಯಮಕ, ಅನುಪ್ರಾಸಮುಂತಾದ ಅಲಂಕಾರಗಳು, ಸಂಗೀತದ ಸುಶ್ರಾವ್ಯ ನಾದಮಯತೆಯೂ ಕಥನಾತ್ಮಕ ಗುಣವೂ ಅಳವಟ್ಟು ವಾಚನ ಯೋಗ್ಯ ಕಾವ್ಯವೆನಿಸಿದೆ. ಈತ ಉತ್ತಮ ಮಟ್ಟದ ಕಥೆಗಾರ. ಕಥೆ ಕೇಳಿದಷ್ಟೂ ಕುತೂಹಲ ಬೆಳೆಯುವುದು ಈತನ ಕಥೆಯ ಗುಣ. ಶೃಂಗಾರ ಭಕ್ತಿ, ಶಾಂತ, ವೀರ, ಹಾಸ್ಯ, ಕರುಣಾರಸಗಳು ಕಾವ್ಯದಲ್ಲಿ ಕೋಡಿವರಿದಿವೆ. ಇಲ್ಲಿಯ ಯುವನಾಶ್ವ, ಸಾಲ್ವ, ನೀಲಧ್ವಜ, ಚಂಡಿ, ಸುಧನ್ವ, ಪ್ರಮೀಳೆ, ಬಭ್ರುವಾಹನ, ಸೀತೆ, ಚಂದ್ರಹಾಸಾದಿ ಕಥೆಗಳು ಹಳ್ಳಿ ಹಳ್ಳಿಯಲ್ಲೂ ಮನೆಮಾತಾಗಿವೆ. ಪ್ರಕೃತಿವರ್ಣನೆಯಂತೂ ಬಹುಚೇತೋಹಾರಿ. ಮಲೆನಾಡರಮ್ಯ ಪ್ರಕೃತಿಯ ವಿಲಾಸೀ ರಂಗು ರಂಗಿನ ಪ್ರಕೃತಿ ದೃಶ್ಯಗಳು ಕಣ್ಣ ಮುಂದೆ ಕಟ್ಟುತ್ತವೆ. ದೇವನೂರಿನ ಪ್ರಕೃತಿ ಸೌಂದರ್ಯ ಅಂದಿನಂತೆಯೇ ಇಂದೂ ಚೇತೋಹಾರಿ, ಬಹುಹಿಂದಿನಿಂದಲೂ ಲಯ,



ಕವಿ ಲಕ್ಷ್ಮೀಶ

ತಾನಬದ್ಧವಾಗಿ ಕಾವ್ಯವನ್ನು ಗಮಕಿಗಳು ಹಾಡಿ ಜೀವನಕ್ಕೆ ಸ್ಫೂರ್ತಿ ನೀಡುತ್ತಿದ್ದಾರೆ, ಧ್ವನಿರಮ್ಯತೆ ಅಲಂಕಾರರಮ್ಯತೆ, ವಚೋರಮ್ಯತೆ ಶಬ್ದರಮ್ಯತೆಗಳಿಂದ ಈ ಕಾವ್ಯ ಆನಂದಗೊಳಿಸುತ್ತದೆ.

ಹೀಗೆ ಕವಿಯ ನೆಲೆವೀಡಾದ ದೇವನೂರು ಸಾಂಸ್ಕೃತಿಕವಾಗಿ ಬಾಳಿದ್ದಹಳ್ಳಿ. ಇಂದು ಬರೀ ಹಳ್ಳಿಯಾಗಿ ಮಾತ್ರ ಉಳಿದುಕೊಂಡದ್ದು ನಮ್ಮಗಳ ನಿರಭಿಮಾನತೆಯನ್ನು ಸೂಚಿಸುತ್ತದೆ. ಕನ್ನಡಿಗರ ಹೃದಯ ಸಾರ್ವಭೌಮವಾದ ಇಂಥ ನೆಲೆವಳ್ಳಿಗಳು ಸಾಹಿತ್ಯಾಸಕ್ತರ ಪ್ರವಾಸೀಕೇಂದ್ರವಾಗಬೇಕು. ★



ಶ್ರೀ ಲಕ್ಷ್ಮೀಕಾಂತದೇವಾಲಯದಲ್ಲಿನ ಲಕ್ಷ್ಮೀಶ ಮಂಟಪ

ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ

# ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ.ತಿ.ದೇ. ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.
* 30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷಿಪಟ್ಟಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2.4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್‌ಗಳನ್ನು 1.2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ:

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಕರ್ನಾಟಕ ನೃತ್ಯ

ಕ್ರಿಸ್ತಪೂರ್ವಕಾಲದಿಂದಲೂ ಕರ್ನಾಟಕದಲ್ಲಿ ನೃತ್ಯವು ಜನಜೀವನದಲ್ಲಿ ಉಚ್ಚಸ್ಥಾನವನ್ನು ಪಡೆದಿರುತ್ತೆಂಬುದನ್ನು ಕರ್ನಾಟಕದ ಪ್ರಾಚೀನ ಶಿಲ್ಪಗಳು ಗಂಟಾಘೋಷವಾಗಿ ಸಾರುವುವು. ಪಶ್ಚಿಮ ಇಂಡಿಯಾದ ಗುಹಾಂತರ್ ದೇವಾಲಯಗಳಲ್ಲಿ ಕಂಡುಬರುವ ಯಕ್ಷರೇ ಮೊದಲಾದವರ ಭಂಗಿಗಳು ಆ ಕಾಲದ ನಾಟ್ಯಕಲೆಯ ಪರಿಚಯವನ್ನು ಹೊರಗೆಡಹುತ್ತವೆ. ಅಜಂತದ 2[illegible] ನೆಯ ಗುಹೆಯಲ್ಲಿರುವ ವರ್ಣಚಿತ್ರವೊಂದು ಪುಲಕೇಶಿಯ ಪುತ್ರಿಯರ ನೃತ್ಯವನ್ನು ಪ್ರದರ್ಶಿಸುವುದು. ಕ್ರಿ. ಶ. 7 ನೆಯ ಶತಮಾನದ ಸರಸಮಂಗಲದ ಕಾಮೇಶ್ವರ ಮತ್ತು ಅರಳಗುಪ್ಪೆಯ ಕಲ್ಲೇಶ್ವರ ದೇವಾಲಯಗಳಲ್ಲಿ ಚಿತ್ರಿತವಾಗಿರುವ ನಟರಾಜ ವಿಗ್ರಹಗಳು ಚೈತನ್ಯಮಯವಾಗಿ ತಾಂಡವದ ಸೊಬಗನ್ನು ಬೀರುವುವು. ಚಾಲುಕ್ಯ ಮತ್ತು ಹೊಯ್ಸಳರ ದೇವಾಲಯಗಳಲ್ಲಿ ಕಂಡುಬರುವ ಮೋಹಿನಿಯ ಮತ್ತು ಇತರ ದೇವತಾವಿಗ್ರಹಗಳ ವಿವಿಧ ಭಂಗಿಗಳು ನಾಟ್ಯಕಲೆಯ ಉಚ್ಚಮಟ್ಟವನ್ನು ಪ್ರದರ್ಶಿಸುವುವು. ಬೇಲೂರಿನ ಕೇಶವ ದೇವಾಲಯದ ಮದನ ಕೈಗೊಂಬೆಗಳು ಅದನ್ನು ಉತ್ತಮ ಕಲಾಪ್ರದರ್ಶನ ಶಾಲೆಯನ್ನಾಗಿ ಮಾಡಿವೆ. ಅವುಗಳಲ್ಲಿ ಅನೇಕವನ್ನು ನೃತ್ಯದಲ್ಲಿಯೋ, ವಾದ್ಯಗಳ ಬಾಜನೆಯಲ್ಲಿಯೋ, ವೇಷಭೂಷಣ ಧರಿಸುವುದರಲ್ಲಿಯೋ ನಿರತವಾಗಿರುವಂತೆ ರೂಪಿಸಲಾಗಿದೆ. ಅವೆಲ್ಲಾ ರಸಭಾವಪೂರ್ಣವಾಗಿವೆ. ಆಪಾದಮಸ್ತಕ ಅಲಂಕೃತವಾಗಿವೆ. ಅವುಗಳ ನಿಂತ ನಿಲುವುಗಳು, ಒಲಿದ ಮುಖಗಳು, ಮಣಿದ ಕೈಗಳು ಎಲ್ಲದರಲ್ಲೂ ಭಾವವ್ಯಕ್ತವಾಗಿವೆ. ವಿಗ್ರಹಗಳು ನಿಂತಿರಲಿ, ನೃತ್ಯರತವಾಗಿರಲಿ ಅವುಗಳ ಅಭಿರಾಮತೆ ಪೂರ್ಣವಾಗಿ ಮನರಂಜಕವಾಗಿವೆ. ಅಲ್ಲಿಯ ಅನೇಕ ಶಿಲ್ಪಗಳು ಮೋಹಿನೀನೃತ್ಯವನ್ನು ಪ್ರದರ್ಶಿಸುತ್ತಿರುವುವು. ಮೂಲಕೇಶವಮೂರ್ತಿಯೇ ಮೋಹಿನೀ ಆಕಾರದಲ್ಲಿ ತೋರ್ಪಡಿಸಿಕೊಂಡಿರುವಂತೆ ಪ್ರತೀತಿ. ಇತರ ಅನೇಕ ಮೂರ್ತಿಗಳು ಅದೇ ಭಂಗಿಯಲ್ಲಿವೆ. ಪೂರ್ವದ್ವಾರದ ದಕ್ಷಿಣದಿಕ್ಕಿನ ವಿಗ್ರಹಗಳಲ್ಲಿ ಎರಡನೆಯದು ಮದ್ದಳೆಯ ನೃತ್ಯ. ಡಮರುಗವನ್ನು ಬಾಜಿಸುತ್ತಿರುವ ಮತ್ತೊಬ್ಬ ನೀರೆ ಸುರಿತ ಬಲಿಷ್ಠ ನರ್ತನಪಟುವಿನ ಭಂಗಿಯಲ್ಲಿದ್ದಾಳೆ. 19–25 ನೆಯ ವಿಗ್ರಹಗಳಲ್ಲಿ ಮೋಹಿನೀ ನೃತ್ಯವನ್ನು ಕಾಣಬಹುದು. 22 ನೆಯದು ದುರ್ಗಾನೃತ್ಯ, 26 ನೆಯದು ವ್ಯಜನ ನೃತ್ಯ, 30 ನೆಯದು ನಾಗವೀಣಾನೃತ್ಯ, ಅವಳ ಬಲಬದಿಗೆ ಒಬ್ಬ ಪುರುಷ ಮೃದಂಗ ಬಾಜಿಸುತ್ತಿದ್ದಾನೆ. ಮತ್ತೊಬ್ಬ ಆಕೆಗೆ ಗಾಳಿ ಬೀಸುತ್ತಾ ಆಕೆಗೆ ಬೇಕಾದಾಗ ಅವಳ ಬಾಯಿಗಿಡಲು ಸುಧಾಪಾತ್ರವನ್ನು ಹಿಡಿದಿದ್ದಾನೆ. 32 ನೆಯದು ಕೊಳಲ ಕುಣಿತ. ಅವಳ ಕೈಬೆರಳುಗಳು ಕೊಳಲ ಮೇಲಾಡುವಂತೆ ಮಣಿದು ಕುಳಿತಂತಿದೆ. ಅವನ ಬಲಕ್ಕೆ ಮಂಗವೊಂದು ಅವಳನ್ನೇ ದಿಟ್ಟಿಸಿ ನೋಡುತ್ತಿರಲು ಸೇವಕನೊಬ್ಬ ಆಕೆಗೆ ಕೊಳಲನ್ನು ನೀಡುತ್ತಿದ್ದಾನೆ. 33 ನೆಯದು ಡಮರುಗ ನೃತ್ಯ. ಅವಳು ಎಡಗಾಲಿನಿಂದ ತಾಳ ಹಾಕುತ್ತಾ ಕುಣಿಯುತ್ತಿರಲು ಇನ್ನಿಬ್ಬರು ಮೃದಂಗವನ್ನು ಬಾಜಿಸುತ್ತಾ ಆಕೆಗೆ ಜೊತೆಗೂಡುತ್ತಿದ್ದಾರೆ. ಇವುಗಳೆಲ್ಲ ಆ ಕಾಲದ ನೃತ್ಯವೈವಿಧ್ಯವನ್ನೂ ನರ್ತಕರ ಕಲಾಕೌಶಲ್ಯವನ್ನೂ ಸ್ಪಷ್ಟಪಡಿಸುತ್ತವೆ. ಈ ಚೆನ್ನಕೇಶವ ದೇವಾಲಯದ ಎದುರಿಗೆ ನಾಟ್ಯಕ್ಕಾಗಿಯೇ ಒಂದು ಕರೀಕಲ್ಲನ್ನು ಹಾಸಿದೆ.

ಈ ಹಾಸುಗಲ್ಲಿನ ಮೇಲೆ ವಿಷ್ಣುವರ್ಧನನ ಅಪ್ಪಣೆಯ ಮೇರೆಗೆ ಅವನ ರಾಣಿಯಾದ ನಾಟ್ಯಸರಸ್ವತಿ ಶಾಂತಲೆಯು ಕೇಶವಸ್ವಾಮಿಯ ಎದುರಿನಲ್ಲಿ ನಾಟ್ಯವಾಡುತ್ತಿದ್ದಳಂತೆ. ಹಳೇಬೀಡು, ಬಳ್ಳಿಗಾವಿ ಮೊದಲಾದ ದೇವಸ್ಥಾನಗಳ ಕಂಭಗಳಲ್ಲಿರುವ ನೃತ್ಯಭಂಗಿಗಳು ಶಿಲ್ಪಿಗಳ ಕಲಾಕೌಶಲ್ಯವನ್ನೂ ರಾಜರ ಕಲಾಪ್ರೋತ್ಸಾಹವನ್ನೂ ವಿಶದಗೊಳಿಸುತ್ತವೆ.

ಮುಂದಿನ ವಿಜಯನಗರದರಸುಗಳ ಕಾಲದಲ್ಲಿ ಸಂಗೀತ ಮತ್ತು ನಾಟ್ಯಗಳಿಗೆ ವಿಶೇಷ ಪ್ರೋತ್ಸಾಹ ದೊರೆತಿದೆ. ವಿಜಯನಗರದ ಕಾಲದಲ್ಲಿ ನೃತ್ಯಕ್ಕೆ ದೊರೆಯುತ್ತಿದ್ದ ಮನ್ನಣೆಯು ದಕ್ಷಿಣಭಾರತದ ಇತಿಹಾಸದಲ್ಲಿ ಅಪೂರ್ವವಾಗಿದೆ. ಎಂಬುದು ಪ್ರೊ. ಸಾಲತ್ತೊರೆಯವರ ಅಭಿಪ್ರಾಯ. ಪರ್ಷಿಯಾದೇಶದ ಪ್ರವಾಸಿಯಾದ ಅಬ್ದುರ್ ರಜಾಕನು ಆ ಕಾಲದ ನೃತ್ಯವಿಲಾಸದ ವರ್ಣನೆಯಿಂದ ಮುಗ್ಧನಾಗಿದ್ದಾನೆ. ನರ್ತಕಿಯರ ನರ್ತನವಿಲಾಸವೂ, ಅವರ ಮಧುರ ಭಾವಭಂಗಿಗಳೂ, ಪಾದಗಳ ಗತಿಯ ಮೋಹಕತೆಯೂ, ಜನರನ್ನು ಮಂತ್ರಮುಗ್ಧರನ್ನಾಗಿಸುತ್ತೆಂದು ಅವನು ತಿಳಿಸಿದ್ದಾನೆ. ಅವನ ಹೇಳಿಕೆಯ ಪ್ರಕಾರ ಅರಮನೆಯಲ್ಲಿ ಒಂದು ಭವ್ಯ ನಾಟಕಶಾಲೆಯಿತ್ತು. ಅಲ್ಲಿ ಗೋಡೆಗಳ ಮೇಲೆ ವಿವಿಧ ಭಂಗಿಯ ನೃತ್ಯದ ಚಿತ್ರಗಳಿರುತ್ತಿದ್ದವು. ಅವುಗಳಿಂದ ರಾಣಿಯರು ನೃತ್ಯಕಲೆಯನ್ನು ಅಭ್ಯಸಿಸಬಹುದಾಗಿತ್ತು. ಈ ಈ ಅಭಿಪ್ರಾಯವು ಶಾಸನಾಧಾರದಿಂದಲೂ ದೃಢೀಕೃತವಾಗಿದೆ, ನರ್ತಕಿಯರಿಗೆ ದೊರೆಯುತ್ತಿದ್ದ ಗೌರವವೂ ಉಚ್ಚರೀತಿಯದು. ಮತ್ತಾರಿಗೂ ಇಲ್ಲದ ರಾಜರ ಮುಂದೆ ತಾಂಬೂಲ ಸವಿಯುವ ಸೌಲಭ್ಯವು ಅವರಿಗೆ ಕೊಡಲ್ಪಟ್ಟಿತ್ತು. ನವರಾತ್ರಿಯ ಸಂದರ್ಭದಲ್ಲಿ ಎಲ್ಲ ಕಲಾವಿದರಿಗೂ ಪಾರಿತೋಷಿಕ ಸಿಗುತ್ತಿತ್ತು. ನೃತ್ಯ ಸಂಗೀತಗಳ ಮೇಳವಾದ, ಕೋಲಾಟವು ಊರ್ಜಿತ ಸ್ಥಿತಿಯಲ್ಲಿತ್ತೆಂದು ಪೀಟ್ರೋಡೆಲಾವಾಲೆ ಎಂಬ ಮತ್ತೊಬ್ಬ ಪ್ರವಾಸಿಯು ಹೇಳಿದ್ದಾನೆ.

ಕೃಷ್ಣದೇವರಾಯನ ನಾಟ್ಯಾಚಾರ್ಯನಾಗಿದ್ದವನು ಬಂಡಂ ಲಕ್ಷ್ಮೀನಾರಾಯಣನೆಂಬುವನು, ಇವನು ಕೃಷ್ಣರಾಯನ ಅಂಕಿತದಲ್ಲಿ "ಸಂಗೀತ ಸೂರ್ಯೋದಯ" ವೆಂಬ 5 ಅಧ್ಯಾಯದ ಗ್ರಂಥವನ್ನು ರಚಿಸಿದನು. ಇವನಿಗೆ "ಅಭಿನವ ಭರತಾಚಾರ್ಯ" "ರಾಯಭರತ" "ಸೂಕ್ಷ್ಮ ಭರತಾಚಾರ್ಯ" ಎಂಬ ಬಿರುದುಗಳಿದ್ದುವು.

**ಡಾ॥ ಎನ್. ಅನಂತರಂಗಾಚಾರ್**

ಕೃಷ್ಣದೇವರಾಯನ ಕಾಲದಲ್ಲಿ ಅರಮನೆಗೆ ಸೇರಿದ ನಾಟ್ಯಶಾಲೆಯಿದ್ದಿತು. ಕಾಲಕಾಲಕ್ಕೆ ಅರಸನು ವಿದ್ವಾಂಸರನ್ನು ಕರೆಯಿಸಿಕೊಂಡು ಸಭೆಯನ್ನು ನಡೆಸುತ್ತಿದ್ದನು. ಅದಕ್ಕೆ "ವಿದ್ವತ್ಸಭಾರಾಯ"ನೆಂಬ ಬಿರುದಿದ್ದಿತು. ಇಂತಹ ಸಭೆಗಳಲ್ಲಿ ನಾಟ್ಯವಾಡಿ ಅವನ ಮನಸ್ಸನ್ನು ಸಂತೋಷಪಡಿಸುವವರ ಒಂದು ಗೋಷ್ಠಿಯೂ ಇರುತ್ತಿತ್ತು. ಈ ಗೋಷ್ಠಿಯ ನಾಯಕ ವಿದ್ವತ್ಸಭಾನಾಯಕ ರಂಜಕ ಶ್ರೀರಂಗರಾಜು ಎಂಬುವವನು, ಇವನಿಗೆ ರಂಜಕಂ ಶ್ರೀರಂಗರಾಜು ಎಂಬ ಅಡ್ಡಹೆಸರಿದ್ದಿತು. ಇವನ ತಂದೆ ತಿರುಮಲನಾಥನು ಭರತನಾಟ್ಯದಲ್ಲಿ ಪ್ರವೀಣನಾಗಿದ್ದನು. ಇವನ ಮಗಳು ಮುದ್ದು ಕುಪ್ಪಾಸಾನಿ. ಇವರು ಮೂವರೂ ನಾಟ್ಯವಿದ್ಯೆಯಲ್ಲಿ ಬಹು ಪ್ರಸಿದ್ಧರು. ಅಚ್ಯುತರಾಯನು ಮುದ್ದು ಕುಪ್ಪಾಸಾನಿಯನ್ನು ತಿರುಪತಿ ಬೆಟ್ಟದ ಮೇಲಿನ ದೇವಸ್ಥಾನದ ಸೇವೆಗಾಗಿ ಕಳುಹಿಸಿಕೊಟ್ಟನು. ಸದಾಶಿವರಾಯನ ಕಾಲದಲ್ಲಿ ತಿರುವೇಂಗಡಂ ಮಾಣಿಕ್ಯಂ ಎಂಬುವಳಿಗೆ ಅವಳ ನಾಟ್ಯ ಪ್ರಾವೀಣ್ಯಕ್ಕಾಗಿ ದೇವಸ್ಥಾನದವರು ತಿರುವೇಂಗಡನಾಥನ ಮಂಡಿಗೆಯನ್ನೇ ಅವಳ ಸ್ವಂತ ಉಪಯೋಗಕ್ಕಾಗಿ ದಾನಮಾಡಿರುವುದು ಶಾಸನಗಳಿಂದ ದೃಢೀಕೃತವಾಗಿದೆ. ಕೃಷ್ಣದೇವರಾಯನು

ಸ್ವತಃ ನಾಟಕಕಾರನಾಗಿದ್ದನು. ಅವನ 'ಜಾಂಬವತೀ ಕಲ್ಯಾಣ"ವು ವಸಂತೋತ್ಸವದಲ್ಲಿ ಅಭಿನಯಿಸಲ್ಪಟ್ಟಿತು. ಆಕಾಲದ ಸಾಳವ ಗೋಪತಿಪ್ಪನ "ತಾಳದೀಪಿಕೆ"ಯಿಂದ ರಂಗಭೂಮಿಗೆ ವಿಶೇಷ ಸಹಾಯವಾಗಿರಬೇಕು. "ಗಂಗಾದಾಸ ಪ್ರತಾಪವಿಲಾಸ"ದಲ್ಲಿ ಒಬ್ಬ ನಟನ ಉಲ್ಲೇಖವಿದೆ. ಗಂಗದೇವರಾಯನು ಒಬ್ಬ ಬೊಂಬೆಯಾಟದವನಿಗೆ 1520 ರಲ್ಲಿ ಒಂದು ದತ್ತಿ ಕೊಟ್ಟಿದ್ದಾನೆ. ವಿಜಯನಗರದ ಶಿಲ್ಪಗಳಲ್ಲಿ ಕೋಲಾಟದ ಸುಂದರಚಿತ್ರವಿದೆ. ಯಕ್ಷಗಾನದವರಿಗೂ ದೊಂಬರಿಗೂ ಹೊನ್ನ ಉಡುಗೊರೆಗಳು ದೊರಕುತ್ತಿದ್ದವು.

ನಾಟ್ಯಕ್ಕೂ ಧರ್ಮಕ್ಕೂ ನಿಕಟ ಸಂಬಂಧವಿರುವುದರಿಂದ ಕರ್ಣಾಟಕದಲ್ಲಿ ಎಲ್ಲ ಧಾರ್ಮಿಕ ಸನ್ನಿವೇಶಗಳಲ್ಲಿಯೂ ನೃತ್ಯ ಏರ್ಪಡಿಸುವುದು ಸಾಮಾನ್ಯ ಸಂಪ್ರದಾಯವಾಗಿದೆ. ಪೂಜೆ ಪುರಸ್ಕಾರ, ಸಾವುನೋವು, ಹಬ್ಬಹರಿದಿನ, ಹರ್ಷದುಃಖಗಳಲ್ಲಿ ಕುಣಿಯುವುದು ಕರ್ಣಾಟಕದಲ್ಲಿ ರೂಢಿಗೆ ಬಂದಿತು. ಪ್ರಾಚೀನಕಾಲದಲ್ಲಿ ಅದು ಪೂಜಾಸಮರ್ಪಣ ಸಾಧನೆ ಮಾತ್ರವಾಗಿತ್ತು. ಆಗ ಆನಂದದಿಂದ ಇಷ್ಟದೇವತಾಪ್ರೀತಿಗಾಗಿ ಕುಣಿಯುತ್ತಿದ್ದರು. ಅದು ಅರ್ಚನೆಯ ಒಂದು ಅಂಗವಾಗಿ ಪರಿಣಮಿಸಿತು. ಅದೇ ನೃತ್ಯವು ಶಿಲ್ಪ ಸಂಗೀತಗಳಲ್ಲೆಲ್ಲಾ ಸ್ಥಾನ ಪಡೆಯಯಲು ಕಾರಣ. ನಾಟ್ಯವು ನಟರಾಜನಿಂದಲೇ ಉದ್ಭವಿಸಿದುದರಿಂದಲೇ ರೌದ್ರಾವೇಶದಲ್ಲಿಯೂ ಆನಂದಪರವಶತೆಯಲ್ಲಿಯೂ ಕುಣಿಯತಕ್ಕ ಸೂಕ್ತಸ್ಥಾನ ದೊರೆತಿದೆ. ಶಿವ, ಪಾರ್ವತಿ, ಕಾಳಿ, ಗಣಗಳು, ಕೃಷ್ಣ ಗೋಪಿಯರು-ಇವರೆಲ್ಲರೂ ನಾಟ್ಯವಾಡಿದ ಸಂದರ್ಭವುಂಟು. ಆ ಪೂಜ್ಯಭಾವನೆಯಿಂದಲೇ ದೇವದಾಸೀ ಸಂಪ್ರದಾಯ ಜಾರಿಗೆ ಬಂದುದು, ಆ ಕಲೆಗೆ ವಿಶೇಷಗಣ್ಯತೆಯೂ ಉಂಟಾಯಿತು. ಮಹಾರಾಣಿಯರೂ ರಾಜಕುಮಾರಿಯರೂ ಅಭ್ಯಾಸ ಮಾಡುವುದಕ್ಕೆ ಯೋಗ್ಯವಿಷಯವಾಯಿತು. ಸಿಂಹಳದ ಒಂದನೆಯ ವಿಕ್ರಮಬಾಹುವಿನ ಮಹಾರಾಣಿ ರೂಪವತಿಯೂ ಕಾಳಿದಾಸನ, ನಾಯಕಿಯಾದ ಮಾಳವಿಕೆಯೂ ನರ್ತಿಸಿ ಆ ಕಲೆಗೆ ಒಂದು ಪ್ರೌಢಸ್ಥಾನವನ್ನು ಕಲ್ಪಿಸಿದರು. ಅರಸರೂ ಅವರಿಗೆ ವೀಣೆಯನ್ನೂ, ಕೊಳಲನ್ನೂ, ನುಡಿಸಲು ಪ್ರೋತ್ಸಾಹಿಸಿದ್ದಾರೆ. ಸಮುದ್ರಗುಪ್ತ, ಅಗ್ನಿವರ್ಣ ಮೊದಲಾದವರು ಇದನ್ನು ಅಭಿಮಾನದಿಂದ ಅಭ್ಯಸಿಸಿ ಪ್ರಚಾರಪಡಿಸಿದುದು ಚಾರಿತ್ರಿಕಾಂಶ.

ಆದುದರಿಂದಲೇ ಎಲ್ಲ ಪ್ರಾಚೀನ ಸಂಸ್ಕೃತ ಮತ್ತು ಕನ್ನಡ ಕವಿಗಳೂ ತಮ್ಮ ಕಾವ್ಯಗಳಲ್ಲಿ ನೃತ್ಯವನ್ನು ಅನಿವಾರ್ಯವಸ್ತುವಾಗಿ ಅಂಗೀಕರಿಸಿ ಸೂಕ್ತಸ್ಥಾನಗಳಲ್ಲಿ ಸಾಕಷ್ಟು ವಿಸ್ತಾರವಾಗಿಯೇ ವರ್ಣಿಸಿದ್ದಾರೆ. ರಾಮಾಯಣದಲ್ಲಿ ಸೀತಾಸ್ವಯಂವರದ ಸಂದರ್ಭದಲ್ಲಿ "ನನೃತುಶ್ಚಾಪ್ಸರಸ್ಸಂಘಾ" ಎಂದೂ ಭರದ್ವಾಜಾಶ್ರಮದಲ್ಲಿ "ನನೃತುಶ್ಚಾಪ್ಸರೋಗಣಾಃ" ಎಂದೂ ಸುಂದರಕಾಂಡದಲ್ಲಿ ರಾವಣ ಅಂತಃಪುರದ ವರ್ಣನೆಯಲ್ಲಿ "ಅಂಗಹಾರ .............. ಕೋಮಲಾ ನೃತ್ಯಶಾಲಿನೀ" ಎಂದೂ ಅದೇ ಕಾಂಡದ 24 ನೆಯ ಸರ್ಗದಲ್ಲಿ "ನೃತ್ಯಾಮೋದಾನಿ ಕುಂಭಿಳಾ" ಎಂದೂ ನೃತ್ಯಕ್ಕೆ ಸೂಚನೆಯನ್ನಿತ್ತಿದೆ.

ಪ್ರಾಚೀನ ಕನ್ನಡ ಕವಿಗಳು ನಾಟ್ಯವಿಚಾರವನ್ನು ತಮ್ಮ ಕಾವ್ಯಗಳಲ್ಲಿ ಪ್ರಕ್ಕರಣಕನುಗುಣವಾಗಿ ವರ್ಣಿಸಿದ್ದಾರೆ. ಜೈನ ಕಾವ್ಯಗಳಲ್ಲಿ ಸಾಮಾನ್ಯವಾಗಿ ಜಿನನ ಜನ್ಮಾಭಿಷವ ಸಂದರ್ಭದಲ್ಲಿಯೂ, ಪರಿನಿಷ್ಕ್ರಮಣ ಕಲ್ಯಾಣ ಸಂದರ್ಭದಲ್ಲಿಯೂ, ಇಂದ್ರನ ಆನಂದನೃತ್ಯವು ವರ್ಣಿತವಾಗಿರುತ್ತದೆ. ಪಂಪನ "ಆದಿಪುರಾಣ", ಪೊನ್ನನ "ಶಾಂತಿಪುರಾಣ", ರನ್ನನ "ಅಜಿತಪುರಾಣ", ನೇಮಿಚಂದ್ರನ "ನೇಮಿನಾಥಪುರಾಣ" ಪಾರ್ಶ್ವನ "ಪಾರ್ಶ್ವನಾಥ ಪುರಾಣ" ಮೊದಲಾದವುಗಳಲ್ಲಿ ಮೇಲೆ ಸೂಚಿಸಿದ ಪ್ರಕರಣಗಳಲ್ಲಿ ನೃತ್ಯವರ್ಣನೆಯು ಅತ್ಯದ್ಭುತವಾಗಿದೆ. ಹಾಗೆಯೇ ಹರಿಹರನು ತನ್ನ "ಕಣ್ಣಪ್ಪನ ರಗಳೆ" "ಕುಂಬಾರಗುಂಡಯ್ಯನರಗಳೆ" ಮತ್ತು "ಭೃಂಗೀಶ್ವರನ ರಗಳೆ"ಯಲ್ಲಿಯೂ, ವಿರೂಪಾಕ್ಷನು ತನ್ನ "ಚೆನ್ನಬಸವಪುರಾಣ"ದ ಅಂಧಕಾಸುರಸಂಧಿಯಲ್ಲಿಯೂ, ರತ್ನಾಕರ ವರ್ಣಿಯು ತನ್ನ "ಭರತೇಶವೈಭವ"ದ ಪೂರ್ವನಾಟಕ ಸಂಧಿ ಮತ್ತು ಉತ್ತರನಾಟಕ ಸಂಧಿಗಳಲ್ಲಿಯೂ ನೃತ್ಯವರ್ಣನೆಯನ್ನು ಮಾಡಿದ್ದಾರೆ. ಇವೆಲ್ಲಕ್ಕಿಂತಲೂ ಚಂದ್ರಕವಿಯ "ಪಂಪಾವಿರೂಪಾಕ್ಷಾಸ್ಥಾನ ವರ್ಣನೆ"ಯ ಬಹು ಮನರಂಜಕವಾಗಿದೆ.

ಪಂಪನ "ಆದಿಪುರಾಣ"ದಲ್ಲಿ ಬರುವ ನೀಲಾಂಜನೆಯ ನೃತ್ಯವು ಅತ್ಯದ್ಭುತವಾಗಿ ವರ್ಣಿತವಾಗಿದೆ. ಅಲ್ಲಿ ಅವಳ ವುಗಿಲ್, ಚೆಲ್ಲ, ನಯಾಕರಣ, ಹೊಸಣಿರು, ರಸಭಾವಾಭಿನಯಗಳು ನಿಪ್ಪೊಸತು. ಅವಳು ನಾಲ್ಕು ವೃತ್ತಿಗಳಲ್ಲೂ ಪ್ರದರ್ಶಿಸುವ ಬೆಡಗು ಪ್ರೇಕ್ಷಕರ ಚಿತ್ತಾಪಹಾರಿಯಾದುವು. ಅವಳ ನೃತ್ಯದ ಲಯವನ್ನು ಅನುಸರಿಸಲಾಗದೆ ವಾದ್ಯಗಾರನು ತಡವರಿಸಿದಾಗ ತನ್ನ ಕಣ್ಣಿನ ಹುಬ್ಬಿನ ಚಲನೆಯಿಂದಲೆ ಆತನನ್ನು ಸರಿಪಡಿಸುವಳು. ಅವಳ ತುಂಬು ಜವ್ವನದ ಮೈಮಾಟ, ನಗುಮುಖ, ಬಟ್ಟಲು ಕಣ್ಣುಗಳ ಕುಡಿನೋಟ ನರ್ತಿಸುವಾಗ ಅವಳು ಹಾರಗಳನ್ನೂ ವಸ್ತ್ರಗಳನ್ನೂ ಸರಿಪಡಿಸಿಕೊಳ್ಳುವ ಬಗೆ, ಒನಪು ಒಯ್ಯಾರ–ಇವು ನೋಡುವವರನ್ನು ಹುಚ್ಚೆಬ್ಬಿಸುತ್ತದೆ, ಬಹು ಶೃಂಗಾರಮಯವಾಗಿವೆ.

ರತ್ನಾಕರ ವರ್ಣಿಯ ನಾಟ್ಯಕ್ಕೆ ಸಂಬಂಧಪಟ್ಟ ವರ್ಣನೆಗಳು ಇನ್ನೂ ಆಕರ್ಷಕವಾಗಿವೆ. ಅಲ್ಲಿಯ ನಾಟ್ಯಶಾಲೆಯ ಅಲಂಕರಣ ಮನಮೋಹಕವಾಗಿದೆ. ನಾಟ್ಯಶಾಲೆಯನ್ನು ಪನ್ನೀರು, ಅಗರು, ಕುಂಕುಮ, ಕಸ್ತೂರಿಗಳಿಂದ ಸಾರಣೆಗೊಳಿಸಿ, ಪುಷ್ಪಮಾಲಿಕೆಗಳಿಂದಲೂ ಮುತ್ತಿನ ಮಾಲೆಗಳಿಂದಲೂ ರತ್ನಗನ್ನಡಿಗಳಿಂದಲೂ ಸಿಂಗರಿಸಿತ್ತು. ಕಂಬಗಳಲ್ಲಿಯೂ ಲೋವೆಗಳಲ್ಲಿಯೂ ಆಕರ್ಷಕವಾದ ಚಿತ್ರಗಳು ಬರೆಯಲ್ಪಟ್ಟಿದ್ದವು. ಅಲ್ಲಿಗೆ ಮದ್ದಳೆ ತಾಳವಾದ್ಯಗಳ ಹಿನ್ನೆಲೆಯಲ್ಲಿ ನೇತ್ರ ಮೋಹಿನಿ, ಚಿತ್ರಮೋಹಿನಿ ಎಂಬ ಇಬ್ಬರು ನರ್ತಕಿಯರು ಪ್ರವೇಶಿಸಿ ಪುಷ್ಪಾಂಜಲಿಯನ್ನು ಸೂಸಿದರು. ಅವರು ಪಚ್ಚೆಯ ಚಲ್ಲಣ, ಪಂಚವರ್ಣದ ಕಾಸೆ, ಬಿಚ್ಚುಮುತ್ತಿನ ಮೊಲೆಕಟ್ಟುಗಳಿಂದ ಅಲಂಕೃತರಾಗಿದ್ದರು. ಅವರಲ್ಲಿ ನೇತ್ರಮೋಹಿನಿಯು ನೂರೆಂಟು ನಿಲುವು, ನೂರೆಂಟು ಕರಣ, ಹದಿಮೂರು ಶಿರೋಭೇದವರಿದು ಬೇರೆ ಬೇರೆಯ ಅರವತ್ತು ನಾಲ್ಕು ಮಾದರಿಯಲ್ಲಿ ನರ್ತಿಸಿದಳು, ಅನಂತರ ಚಿತ್ರಮೋಹಿನಿ ಪ್ರವೇಶಿಸಿದಳು, ತಾಳಲಯಗತಿಗನುಗುಣವಾಗಿ ನಡೆದಳು. ಪೆರ್ವರೆಯಂತೆ ಮುಂದೊತ್ತಿ ಸಾಗಿವಳು, ಕಡಲ ಭರತದಂತೆ ಹಿಂದಕ್ಕೆ ಸರಿದು ಸುಳಿದು ಸುತ್ತಿದಳು. ನಾಟ್ಯದೊಳು ಸಮ್ಮೋಹನ ಜಲಧಿಯಂತೆ ಬಲಕೆಡಕೊಲೆದು ಹರಿದೆಳವೇಳೆಯ ಬಿಸಿಲಿನಲ್ಲಿ ಎಳೆನಾಗರ ಹರಿದಂತೆ ಮುಂದೆ ರಂಗದೊಳು ಮೇಲುಪ್ಪರಿಸುವಂತಾದಾಗ ಪುಟನೆಗೆದು ಪೊಯ್ಚೆಂಡಿನಂತೆ, ಬೊಗರಿಯಂತೆ ಮೇಲೆ ಹಾರಿದಳು. ಪೊನ್ನಮೊಲೆಯ ಮೋಹಕ ತೋರಿ ನೃಪಸುತರಿಗೆ ಹುಬ್ಬಹಾರಿಸಿ ನನುನಗುತ ನೃತ್ಯವಾಡಿದಳು.

ಚಂದ್ರಕವಿಯ "ವಿರೂಪಾಕ್ಷಾಸ್ಥಾನ ವರ್ಣನೆ"ಯಲ್ಲಿ ನಿರೂಪಿತವಾಗಿರುವ ನಾಟ್ಯವರ್ಣನೆಯು ಇನ್ನೂ ಶಾಸ್ತ್ರೀಯ ಪ್ರಕ್ರಿಯೆಗಳಿಂದ ವರ್ಣಿತವಾಗಿದೆ. ಅದು ಹೀಗಿದೆ– "ಮತ್ತಮಾ ಸಂಸಾರ ನಾಟಕದ ಸೂತ್ರಧಾರನೆನಿಪ ಶ್ರೀ ವಿರೂಪಾಕ್ಷನ ನಿರೂಪದಿಂ ಸಮ್ಮುಖದಲ್ಲಿ ಪಿಡಿದ ಪಟ್ಟಾವಳಿಯ ಜವನಿಕೆಯೊಳಗೆ ಸಮುಚಿತವಾದ ಭೂಮಿಕೆಯಂ ತಳದಲ್ಲಿ ದೇಸಿ ದೂಸರಮಾಗವಿನ ಸಮಕಟ್ಟಿ ರನ್ನದೊಡವೆ ಮುತ್ತಿನ ಮಾಲೆಗಟ್ಟಿನ ಪೊಂಬಟ್ಟೆಯ ಚಲ್ಲಣದ ನಿರಿಗಟ್ಟಿದ ಧೋರ್ರುಕದ ಮಿರುಗುವ ಪೊನ್ನುಡಿಯ ನೂಲಿನ ಕಿರುಗೆಜ್ಜೆಯ ಕೊರಳಮಣಿ ಮೇಖಲೆಯ ರತಿಯನಣಕಿಸುವ ರೂಪಿನ ಕಾಮಂಗೆ ಕೈವಲಮಾದ ಜವ್ವನದ ಸಿರಿಗೆ ಸರಿಯೆನಿಪ ಸೊಬಗಿನ ಕಮಲಜನ ಕಾಂತಿಗೆ ಕಾಲ್ಗೊಡರನಿಕ್ಕುವ ಕಲಾಕೌಶಲದ ಬಿರುದಿನ ಬಿಂಕಮನಾಳ್ದ

## ಪ್ರಕಟನೆ

**ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.**

**—ತಿ. ತಿ. ದೇ.**

ರ್ತಕಿ ಸಮುಚಿತವಾದ ಸಾಲ ವಾದ್ಯವೇಣುಶ್ರುತಿಯಾಗಿ ವಾಸದೊಡನೆ ಕೂಡಿ ಗಾಯಕಿಯರ ಗಾನದಿಂ ಸೊಗಸಿಂ ಬೀರುತಿರೆ ತಾಳಧರರವಧಾನಂಗೆಯ್ದಿರೆ ಪಾತ್ರದ ಸರಮಂ ಸೂಚಿಸಿ, ಸೂತ್ರಧಾರಂ ಕಾಂಡಪಟಮಂ ಕೆಳಕೆ ಸೆಳೆಯೆ, ನಿಲುಕಡೆಯಿಂ ಜಲಕ್ಕನೆ ಮೂಡಿಸುತ್ತೆ ಮೆಲ್ಲ ಮೆಲ್ಲನೆ ಚೆಲ್ವಿಂಗಳ ಪೆಸಾನಗಳಂ ಕರೆವುತ್ತೆ ತಕ್ಕನೆ ಮುಂದಡಿಯಿಡುತ್ತೆ, ಮಳೆಗಾಲದ ಮುಗಿಲ ಮಿಂಚು ಪೆಳಪೆಳಮಿಂಚಿನ ಕುಡಿಯಂತೆ ನೀಲದ ನೆಲೆಗಟ್ಟಿನ ರಂಗದೊಳೆ ಸುಳಿವುತ್ತೆ, ಅಂಗೋಪಾಂಗ ಪ್ರತ್ಯಂಗಗಳಿಂದೊದಗುವ ಆಂಗಿಕ, ಆಹಾರ್ಯಕ, ಸಾತ್ವಿಕ, ವಾಚಿಕಮೆಂಬ ನಾಲ್ಕುಂತೆರಫಿನಯಂಗಳಿಂ ಸ್ಥಾಯೀಭಾವಮಂ ನೆಲೆಗೊಳಿಸುತ್ತೆ ಸಂಚಾರಿಯುಂ ಸುಳಿಸುತ್ತೆ ಸಾತ್ವಿಕಮಂ ಸ್ಫೈತೆಸಿಸುತ್ತೆ, ಅಂಗಹಾರಕರಣ ಸ್ಥಾನಕ ಚಾರಿಗಳಿಂ ಚಾತುರ್ಯಮನೆಸಗುತ್ತೆ, ಶೃಂಗಾರ ಮೊದಲಾದೆಂಟುರಸಮಂ ರಸಿಕರ ಚಿತ್ತದೊಳ್ ಬಿತ್ತಿ ಬೆಳೆಸುತ್ತ ನಾನಾವಿಧನಾಟ್ಯಮನಭಿನಯಿಸಿ ತೋಱುತ್ತಿರ್ದಳ್.

"ಮತ್ತಮೋರ್ವನರ್ತಕಿ ನೃತ್ಯಕ್ಕೆ ತಕ್ಕ ನೇಪಥ್ಯಮಂ ಧರಿಸಿ ಲವಣೆ, ಲಾಗು, ಮುರುಹು, ಗುಂಡಲ, ಲಾಗನುಲಾಗು, ಬೀಸುಗಾಲು ದೂಷಿ, ವಿಷಮದೂಷಿ ಪೇರಣಿಡೊಕ್ಕ ಅಮಡಿ ಮಂಡಿ ಮೊದಲಾದ ಗಡದಡವುಗಳನಳವಡಿಸಿ ಪಲತೆರದ ದುವಾದಮು ಕೂಡಿ ತುಳಿಲ ಹೊಳಹುದೋಱಿ ತಾಂಡವಮಂ ಬಿತ್ತರಿಸಿ ತರಹರನಿಸ್ಸರಣೆ ಒತ್ತುಮಾನ ಬಿಟ್ಟುಮಾನ ತಿರುಪುಮಾನ ತೇಕು ಅಳುಕು ಓಸರಂ ಮೊದಲಾದ ಅಂದವುಳ್ಳಡವುಗಳಂ ಮುಖಿಬಾಳೆಯ ನೇರುರುವುಗಳಂ ಕೊಳುತ್ತ, ಶಬ್ದ ಪ್ರಬಂಧಮಂ ಶುದ್ಧಮಾಗಿ ನುಡಿಸಿ, ಗೀತದ ಬಂಧಮಂ ಮೆಯ್ಯೊಳಳವಡಿಸಿ, ಕೋಪಿನ ಸೇರುವೆಯುಂ ಕಾಣಿಸಿ, ರೇಖೆಯಿಂದೆ ರೂಪುದೋಱಿಸಿ, ಚೌಕದಿಂದೆ ಚೆಂದಂಬಡಿಸಿ, ಮುಖರಾಗದಿಂದೆ ರಂಜಿಸಿ ದಿಟ್ಟಿಯಿಂದೆ ಊಹಿಸಿ, ಜಕ್ಕವಕ್ಕೆಯ ನಿಲುಕಡೆಯಂತೆ ದರುಗೊಳಿಸಿ, ಪುತ್ತಳಿಯಂತೆ ಪಿಡಿಯಬಲ್ಲನೊಳ್ಪಂಬಡಿಸಿ, ಮೀಂಬುತಲಿಗನಂತೆ ಲಾಗಿನ ಪವನಮಂ ಬಲಿದು, ಎಳವಾವಿನ ಹೊಳಹಿನಂತೆ ಮೈಲಾವಣ್ಯಮಂ ತೋಱಿ, ತಿಗುರಿಯಂತೆ ತಿರುಪದದರುವಂ ನಿಲಿಸಿ, ಸುಂಟರಗಾಳಿಯಂತೆ ಸುಳುಹಿನೊದವನೊದವಿಸಿ ಲಾಸ್ಯದ ರಹಸ್ಯಮನರಿಪಿ ಪೆಕ್ಕಣ ಪೇರಣ ಕುಂಡ ದಂಡವಾಸಕ ಗೌಳುಕುಗಳ ಕಣ್ಗೊಳಿಸುತಿರ್ದಳ್" ಇಲ್ಲಿ ಉಪಯೋಗಿಸಿರುವ ಅನೇಕ ಪಾರಿಭಾಷಿಕ ಶಬ್ದಗಳನ್ನು ಈಗ ಅರ್ಥೈಸುವುದು ಕಷ್ಟ.

ಕರ್ನಾಟಕದ ನೃತ್ಯ ವೈಭವವನ್ನು ನಾವು ಕಾಣುವುದು ಜಾನಪದ ಕುಣಿತಗಳಲ್ಲಿ. ಇತಿಹಾಸಪೂರ್ವಕಾಲದಿಂದಲೂ ಪ್ರಪಂಚದ ಇತರ ಪಂಗಡಗಳಂತೆಯೇ ಕನ್ನಡಿಗರು ಸುಗ್ಗಿ, ಇಂದ್ರಜಾಲ, ಸಮರ, ಧಾರ್ಮಿಕ ಸಂದರ್ಭ, ಕೃಷಿದೇವತೆಯ ಪೂಜೆ, ಸಾಮಾಜಿಕ ಕೂಟಗಳು, ಅಂತ್ಯ ಸಂಸ್ಕಾರ–ಮೊದಲಾದ ಸಂದರ್ಭಗಳಲ್ಲಿ ನರ್ತನ ಮಾಡುವುದು ಸಂಪ್ರದಾಯವಾಗಿ ಮೃಗಗಳ ಚಲನವಲನಗಳನ್ನೂ ಪಕ್ಷಿಗಳ ಕೂಜನವನ್ನು ಅನುಕರಿಸುತ್ತಿದ್ದುದೂ ಪರಿಚಯವಾಗಿದೆ, ನರ್ತನವು ಶಾರೀರಿಕ ದಾರ್ಢ್ಯ, ಸಮಾಜದ ಐಕ್ಯತೆ, ಕಲಾಭ್ಯಾಸ, ವಿನೋದ ಕಾಲಕ್ಷೇಪ ಮೊದಲಾದುವುಗಳಿಗೆ ಸಾಧನವೆಂದು ಜನರು ತಿಳಿದಿದ್ದರು. ಅದಕ್ಕಾಗಿ ಹಳ್ಳಿಯ ಜನ ಅನೇಕ ವಿಧವಾದ ಕುಣಿತಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಈಗ ಅವುಗಳ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಸುಮಾರು ಒಂದು ಸಹಸ್ರ ಮಾದರಿಯ ಕುಣಿತಗಳಾದರೂ ಇವೆಯೆಂದು ಊಹಿಸಲಾಗಿದೆ. ಅವುಗಳಲ್ಲಿ ಕೊನೆಯ ಪಕ್ಷ 200 ಸ್ಪಷ್ಟ ಜಾತಿಗಳನ್ನಾದರೂ ಗುರುತಿಸಬಹುದು. ಮುಂದಿನ ಕೆಲವನ್ನು ಮಾದರಿಗಾಗಿ ಹೆಸರಿಸಬಹುದು. ಹೊಲೆಯರ ಕುಣಿತ, ಹರಿಣಿಶಿಕಾರಿಯ ಕುಣಿತ, ರಾಣಿಯರ ಕೋಲಾಟ, ಕುಡಿಯರ ಕುಣಿತ ಮೊದಲಾದುವು ಕರಾವಳಿಯಲ್ಲಿ ಪ್ರಚಾರದಲ್ಲಿವೆ. ಪರವಂತರ ಕುಣಿತ, ವೀರಮಕ್ಕಳ ಕುಣಿತ, ಬಗ್ಗರ ಕುಣಿತ, ನಂದಿಕೋಲು ಕುಣಿತ, ವೀರಭದ್ರನ ಕುಣಿತ, ಮಾರೀ ಕುಣಿತ, ಮೊದಲಾದುವು ಹಳೆಯ ಮೈಸೂರು ಪ್ರಾಂತದಲ್ಲಿ ರೂಢಿಯಲ್ಲಿವೆ. ಅಲಾಯಿಹೆಜ್ಜೆ, ಕರಪಾಲ ಮೇಳ, ಹಲಗೆ ಕುಣಿತ, ಪಟದ ಕುಣಿತ, ಹೆಜ್ಜೆಕುಣಿತ, ಬೇಡಿಕೆ ಮೇಳ, ಕೊಂಡದ ಕುಣಿತ, ದುಮ್ಮಾಲ ಕುಣಿತ, ಲಂಬಾಣಿ ಕುಣಿತ, ಚಿಟ್ಟಿಮೇಳ, ತಾಳ ಮದ್ದಳೆ, ಅಂಟಿಕೆ ಪಂಟಿಕೆ, ಪಂಡರಿ ಭಜನೆ ಗೊರವರ ಕುಣಿತ, ಭೂತದ ಸೇವೆ, ರಂಗದ ಕುಣಿತ, ಕರಡಿ ಮಜಲು, ಸೋಮನ ಕುಣಿತ, ಭಾಗವಂತಿಕೆ ಮೇಳ, ಉಮ್ಮತ್ತಾಳ, ಬೀಸುಕಂಸಾಳೆ, ಮಲಕಿನಕೋಲು, ಪಂಜಿನ ಕುಣಿತ, ಡೊಳ್ಳುಕುಣಿತ, ಕರಗದ ಕುಣಿತ–ಮೊದಲಾದುವು ಇತ್ತೀಚೆಗೆ ಗುರುತಿಸಲ್ಪಟ್ಟಿವೆ.

ಕೊಡವರು ನೃತ್ಯಪ್ರಿಯರು. ಅವರಲ್ಲಿ ಹುತ್ತರಿಯ ಕುಣಿತ, ಬೊಳಕಾಟ, ಕೋಲಾಟ ಮೊದಲಾದ ಜಾನಪದ ನೃತ್ಯಗಳಿವೆ, ಅವರ ನೃತ್ಯಗಳೆಲ್ಲ ವೀರರಸ ಪ್ರಧಾನವಾಗಿವೆ. ದುಡಿಯ ಬಡತಕ್ಕೆ ಅನುಗುಣವಾಗಿ ಹೆಜ್ಜೆಗಳನ್ನು ಹಾಕುತ್ತಾ ಅವರು ಕುಣಿಯುವರು. ಹುತ್ತರಿಹಬ್ಬದ ಅವಸರದಲ್ಲಿ ಐದು ದಿನಗಳ ಪರ್ಯಂತ ಕೋಲಾಟವೆಂಬ ನೃತ್ಯವನ್ನು ಮಾಡುವರು "ಪರಿಯಕಳಿ" ಎಂಬುದು ವೀರರಸ ಪ್ರಧಾನವಾದ ಯುದ್ಧ ನೃತ್ಯ. ಬೊಳಕಾಟವೆಂಬ ನೃತ್ಯವು ಅಖಿಲ ಭಾರತದಲ್ಲಿ ಪ್ರಖ್ಯಾತಿ ಪಡೆದಿದೆ. ರಾತ್ರಿಯ ವೇಳೆ ಪ್ರಜ್ವಲಿಸುವ ಅಗ್ನಿಕುಂಡದ ಸುತ್ತಲೂ ಈ ನೃತ್ಯವನ್ನು ಆಡುವರು.

ಜಾನಪದ ನೃತ್ಯಗಳಲ್ಲಿ ಪ್ರಸಿದ್ಧವಾದುವು ಯಕ್ಷಗಾನಗಳು. ಇದರ ಅಪಭ್ರಂಶವೇ ಕನ್ನಡ ಕಾವ್ಯಗಳಲ್ಲಿ ಸೂಚಿತವಾಗಿರುವ ಎಕ್ಕಲಗಾನವಿರಬೇಕು. ಇವು ಬಹಳ ಕಾಲದಿಂದಲೂ ಕರ್ನಾಟಕದಲ್ಲಿ ಪ್ರಚಾರದಲ್ಲಿದ್ದಿರಬೇಕು. ಇದು ದ್ರಾವಿಡ ಭಾಷೆಗಳಲ್ಲಿ ಬೇರೆ ಬೇರೆ ಹೆಸರಿನಿಂದ ಪ್ರಸಿದ್ಧವಾಗಿವೆ, ಕನ್ನಡದಲ್ಲಿ ಬಯಲಾಟ, ದಶಾವತಾರಆಟ ಭಾಗವತರ ಆಟ ಎಂಬ ಭಿನ್ನ ನಾಮಗಳಲ್ಲಿವೆ, ತಮಿಳಿನಲ್ಲಿ ಶಿವಲೀಲಾ ನರ್ತನ, ಅರೆಯರ್‌ಕೂತ್ತು, ತೆರುಕ್ಕೂತ್ತು ಎಂಬ ರೂಪಗಳಲ್ಲಿವೆ. ಆಂಧ್ರದಲ್ಲಿ ವೀಧಿನಾಟಕವೆಂದು ಕರೆಯಲ್ಪಡುತ್ತದೆ. ಮಲೆಯಾಳದಲ್ಲಿ ಕಥಕಳಿ, ಕಿಳಿಪ್ಪಾಟ್ಟು ಅಟ್ಟಕಥೆ ತುಳ್ಳೆಲ್ ಎಂಬ ಪ್ರಕಾರಗಳಲ್ಲಿವೆ. ಇವುಗಳೆಲ್ಲ ನೃತ್ಯಪ್ರಧಾನವಾದುವು. ತಾಳ, ಮದ್ದಳೆ, ಮತ್ತು ಇತರ ವಾದ್ಯಗಳ ಸಂಗೀತದ ಹಿನ್ನೆಲೆಯಲ್ಲಿ ನಟರು ವಿವಿಧ ರೀತಿಯ ತಮ್ಮ ನಾಟ್ಯ, ಮುದ್ರೆ ಮತ್ತು ಅಭಿನಯಗಳಿಂದ ಕಥೆಯನ್ನು ಪ್ರದರ್ಶನ ಮಾಡುತ್ತಾರೆ. 12 ನೆಯ ಶತಮಾನದಲ್ಲಿ ತಂಜಾವೂರಿನ ರಘುನಾಥನಾಯಕನ ಆಶ್ರಯದಲ್ಲಿ ಅನೇಕ ಯಕ್ಷಗಾನಗಳು ತೆಲುಗಿನಲ್ಲಿ ರಚಿತವಾದುವು. ಸುಮಾರು ಅದೇ ಕಾಲದಲ್ಲಿ ಪಶ್ಚಿಮಕರಾವಳಿಯಲ್ಲಿ ಅನೇಕ ಯಕ್ಷಗಾನಗಳು ಜನ್ಮತಾಳಿದುವು, ಕನ್ನಡ ಯಕ್ಷಗಾನಗಳ ಮೇಲೆ ತೆಲುಗಿನ ಯಕ್ಷಗಾನಗಳೂ ಮತ್ತು ಕೇರಳದ ತುಳ್ಳಲ್ ಮತ್ತು ಕಥಕ್ಕಳಿಗಳೂ ಪ್ರಭಾವ ಬೀರಿರಬೇಕು, ಕೇರಳದ ಕಥಕ್ಕಳಿಯಲ್ಲಿರುವ ಶುದ್ಧ ಮೃದಂಗ, ಚಂಡೆ ಮದ್ದಳೆಗಳೆಂಬ ಚರ್ಮವಾದ್ಯಗಳೂ ಜಾಗಟೆ ತಾಳ, ಚಕ್ರತಾಳಗಳೆಂಬ ಘನವಾದ್ಯಗಳೂ ವೇಷಭೂಷಣಗಳೂ ಕನ್ನಡದ ಬಯಲಾಟಗಳಲ್ಲಿಯೂ ಇವೆ. ಆದರೆ ಕೇರಳದ ಕಥಕ್ಕಳಿಯವರು ಹಸ್ತಮುದ್ರೆಗಳ ಅಭಿನಯದಿಂದಲೇ ಮೂಕನಾಟ್ಯವನ್ನಾಡುತ್ತಾರೆ, ಕನ್ನಡದ ಬಯಲಾಟದವರು ಪಾತ್ರವರ್ಗಗಳ ವಕ್ತೃತ್ವದಿಂದ ಕಥೆಯನ್ನು ಪ್ರದರ್ಶನ ಮಾಡುತ್ತಾರೆ. 18–19 ನೆಯ ಶತಮಾನಗಳಲ್ಲಿ ಕರಾವಳಿಯಲ್ಲಿ ಪಾರ್ತಿಸುಬ್ಬನೆಂಬುವನು 20 ಕ್ಕಿಂತ ಹೆಚ್ಚು ಯಕ್ಷಗಾನಗಳನ್ನು ರಚಿಸಿ "ಯಕ್ಷಗಾನ ವಾಲ್ಮೀಕಿ" ಎಂಬ ಪ್ರಶಸ್ತಿಯನ್ನು ಪಡೆದನು. ಅವನನ್ನು ಅನುಸರಿಸಿ ಹಳೇಮಕ್ಕಿರಾಮ, ಸಾಯಿಮ್ಮ ಮುಂತಾದವರು ಮುಂದೆ ಅನೇಕ ಅಂತಹ ಕೃತಿಗಳನ್ನು ರಚಿಸಿ ಪ್ರದರ್ಶಿಸಿದರು, ಅದರ ಪ್ರಭಾವದಿಂದ ಮೈಸೂರು ರಾಜರ ಆಶ್ರಯದಲ್ಲಿಯೂ, ಅಳಿಯಲಿಂಗರಾಜ ಮೊದಲಾದರಿಂದ ಅನೇಕ ಯಕ್ಷಗಾನಗಳು ರಚಿತವಾದುವು. ಉತ್ತರ ಕರ್ನಾಟಕದಲ್ಲಿಯೂ ಅದರ ಬೆಳಸು ಹುಲುಸಾಯಿತು. ಇವೆಲ್ಲದರ ಪ್ರಭಾವದಿಂದ ಮರಾಠಿ ಯಕ್ಷಗಾನಗಳು ತಲೆದೋರಿ ಕಾಲಕ್ರಮದಲ್ಲಿ ಆಧುನಿಕ ನಾಟಕಗಳಾಗಿ ಪರಿಣಮಿಸಿರುವು. ಈಚೆಗೆ ಡಾ|| ಶಿವರಾಮ ಕಾರಂತರು ಯಕ್ಷಗಾನ ಸಾಹಿತ್ಯ, ಸಂಗೀತ, ನಾಟ್ಯ ವೇಷಭೂಷಣಗಳು ಮೊದಲಾದ ವಿಷಯವಾಗಿ ಆಳವಾಗಿ ಅಧ್ಯಯನ ನಡೆಸಿ "ಯಕ್ಷಗಾನ ಬಯಲಾಟ" ಎಂಬ ಉದ್ಗ್ರಂಥವನ್ನು ರಚಿಸಿದ್ದಾರೆ. ಇದಕ್ಕೆ ಸ್ವೀಡಿಷ್ ಅಕಾಡೆಮಿಯ ಪಾರಿತೋಷಿಕವೂ ದೊರೆತಿದೆ. ಇದು ಹಿಂದಿ ಮತ್ತು ಇಂಗ್ಲೀಷ್ ಭಾಷೆಗಳಿಗೂ ಭಾಷಾಂತರವಾಗಿದೆ. ಕಾರಂತರು ಯಕ್ಷಗಾನ ವಿಷಯಗಳಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿ ಸ್ವತಃ ಯಕ್ಷಗಾನ ರೂಪಕಗಳನ್ನು ರಚಿಸಿ ತಾವೇ ನಿರ್ದೇಶಕರಾಗಿ ಅಭಿನಯಿಸಿ ತೋರಿಸಿದ್ದಾರೆ.

ಸೂತ್ರದ ಬೊಂಬೆಯ ಆಟಗಳೂ ಚಕ್ಕಳದ ಬೊಂಬೆಯ ಆಟಗಳೂ ಯಕ್ಷಗಾನದ ಜಾತಿಗೆ ಸೇರಿದವು. ಆದರೆ ಇಲ್ಲಿ ನಾಟ್ಯವಾಡುವುದು ಬೊಂಬೆಗಳೇ ವಿನಾ ಮನುಷ್ಯರಲ್ಲ. ಬೊಂಬೆಗಳ ಕುಣಿತಕ್ಕೆ ಹೊಂದಿಕೊಳ್ಳುವಂತೆ ಮರೆಯಲ್ಲಿರುವ ಮನುಷ್ಯರು ಸಂಭಾಷಣೆಗಳನ್ನೂ ಸಂಗೀತಗಳನ್ನೂ ಅಳವಡಿಸಿಕೊಂಡಿರುತ್ತಾರೆ. ಸೂತ್ರದಿಂದ ಆಡಿಸಲ್ಪಡುವ ಬೊಂಬೆಗಳು ಬಹಳ ಪರಿಷ್ಕಾರವಾಗಿ ಮಾಡಲ್ಪಟ್ಟಿರುವುವು ಅಂಗಾಂಗಗಳ ಕೀಲುಗಳನ್ನು ಕೆಳಗಿನ ದವಡೆಗಳನ್ನು ಟೊಳ್ಳಾಗಿರುವ ಬೊಂಬೆಯ ಒಳಭಾಗದಿಂದ ಕಟ್ಟಿ, ಹಾಗೆಯೇ ತಲೆಯ ಮೇಲ್ಭಾಗದಲ್ಲಿ ಬೆತ್ತದಿಂದಾಗಲಿ ಲೋಹದಿಂದಾಗಲೀ ಮಾಡಲ್ಪಟ್ಟ ಚಕ್ರಕ್ಕೆ ಕಟ್ಟಿ ಆಡಿಸುವ ಬೊಂಬೆಯು

ಆಟಕ್ಕೆ ಸೂತ್ರದ ಬೊಂಬೆಯ ಆಟವೆಂದು ಹೆಸರು. ಇಂಥ ಆಟಗಳಲ್ಲಿ ಒಂದೊಂದು ಆಟದಲ್ಲಿಯೂ ಪರಿಷ್ಕೃತವಾದ 30–40 ಬೊಂಬೆಗಳನ್ನು ಉಪಯೋಗಿಸುತ್ತಾರೆ. ನಿರ್ಮಿಸಿದ ರಂಗಭೂಮಿಯ ಮೇಲ್ಭಾಗದಲ್ಲಿ ಒಂದು ಅಟ್ಟಣೆಯನ್ನು ಕಟ್ಟಿ ಅದರ ಮುಂಭಾಗದಲ್ಲಿ ವರ್ಣಚಿತ್ರಮಯವಾದ ಒಂದು ತೆರೆಯನ್ನು ಮೇಲ್ಭಾಗದಿಂದ ಇಳಿಯಬಿಟ್ಟು ಆಟಗಾರರು ಪ್ರೇಕ್ಷಕರಿಗೆ ಕಾಣದಂತೆ ಅಟ್ಟಣೆಯ ಮೇಲೆ ಕುಳಿತು ಬೊಂಬೆಗಳನ್ನು ಮೇಲಿನ ತೆರೆಯ ಮುಂಭಾಗದಲ್ಲಿ ಬಿಟ್ಟು ಆಡಿಸುವರು. ಪ್ರತಿಯೊಬ್ಬ ಆಟಗಾರನೂ ಈ ರೀತಿ ಸೂತ್ರಗಳಿಂದ ಎರಡು ಬೊಂಬೆಗಳನ್ನು ಆಡಿಸಿದರೂ ಬೊಂಬೆಗಳ ಅಭಿನಯ ಕೌಶಲ್ಯವು ಸ್ವಲ್ಪವೂ ಕೆಡದ ಆಟದಲ್ಲಿ ಮನುಷ್ಯರು ಪಾತ್ರವಹಿಸಿದಂತೆಯೇ ಹಾವಭಾವ ವಿಲಾಸಗಳು ಕಂಡುಬರುವುವು. ಹೀಗೆಯೇ ಚಕ್ಕಳದ ಬೊಂಬೆಗಳು ಕೂಡ ಅಭಿನಯಿಸುವಂತೆ ಮಾಡುತ್ತಾರೆ. ಆದರೆ ಬೊಂಬೆಯ ಆಟದಲ್ಲಿ ಅವಲಂಬಿಸುವ ಮಾರ್ಗ ಬೇರೆಯಾಗಿರುವುದು. ಚಕ್ಕಳದ ಬೊಂಬೆಗಳು ಚಪ್ಪಟೆಯಾಗಿ ಮಾಡಲ್ಪಟ್ಟು, ಅಂಗಾಂಗಗಳ ಕಾಲುಗಳೂ ಮತ್ತು ಕೆಳದವಡೆಗಳೂ ಸಣ್ಣ ಸೂತ್ರಗಳಿಂದ ಕಟ್ಟಲ್ಪಟ್ಟು ಕೆಳಭಾಗದಲ್ಲಿ ಒಂದು ಕಾಷ್ಠ ವಿಶೇಷಕ್ಕೆ ಬಂಧಿಸಲ್ಪಟ್ಟಿರುವುವು. ರಂಗಸ್ಥಳದಲ್ಲಿ ಆಟಗಾರರು ಕಪ್ಪುಬಟ್ಟೆಯ ಬಿಡಾರವೊಂದನ್ನು ನಿರ್ಮಿಸಿ ಮುಂಭಾಗದಲ್ಲಿ ತೆಳ್ಳಗಿರುವ ಬಿಳಿಯಬಟ್ಟೆಯ ತೆರೆಯೊಂದನ್ನು ಕಟ್ಟುವರು. ಬಿಡಾರದೊಳಗೆ ಹಿಂಭಾಗದಲ್ಲಿ ಹೆಚ್ಚಾಗಿ ಪ್ರಕಾಶವನ್ನು ಕೊಡುವ ದೀಪವನ್ನು ಇಡುವರು. ಇದರ ಕಾಂತಿಯಿಂದ ತೆರೆಯೆಲ್ಲಾ ಬೆಳ್ಳಗೆ ಕಾಣುವುದು. ಬಿಡಾರದೊಳಭಾಗದಲ್ಲಿ ದೀಪಕ್ಕೂ ತೆರೆಗೂ ಮಧ್ಯ ಆಟಗಾರರು ತೆರೆಯಮಟ್ಟಕ್ಕಿಂತ ಕೆಳಗೆ ಕುಳಿತುಕೊಂಡು ಚಕ್ಕಳದ ಬೊಂಬೆಗಳನ್ನು ಕೈಗಳಿಂದ ಆಡಿಸುವರು. ಹೀಗೆ ಆಡಿಸುವಾಗ ಈ ಬೊಂಬೆಗಳ ನೆರಳುಗಳೇ ನಾಟ್ಯವಾಡುವಂತೆ ಭಾಸವಾಗುವುದು. ಈ ಎರಡು ಆಟಗಳೂ ವಿಶೇಷವಾದ ಕಲಾಕೌಶಲದಿಂದ ಕೂಡಿದುದಾಗಿರುತ್ತವೆ.

ಪ್ರಸಕ್ತ ಕಾಲದಲ್ಲಿ ಮೇಲೆ ಹೇಳಿದ ವಿವಿಧ ದೇಶೀಯ ನೃತ್ಯಮಾರ್ಗಗಳೇ ಅಲ್ಲದೆ ಹೊರದೇಶೀಯಗಳಾದ ಕಥಕ್, ಕೂಚುಪುಡಿ ಮತ್ತು ಮಣಿಪುರಿ ನೃತ್ಯಗಳು ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಬಳಕೆಯಲ್ಲಿವೆ. ಕಥಕ್ ಎಂಬುದು ಒಂದು ರೀತಿಯ ಭಕ್ತಿ ನೃತ್ಯ, ರಾಜಾಸ್ಥಾನ ಮತ್ತು ಸುತ್ತ ಮುತ್ತಲಿನ ಉತ್ತರ ಪ್ರದೇಶಗಳಲ್ಲಿ ಪ್ರಚಾರದಲ್ಲಿದೆ. ಕೂಚುಪುಡಿ ಎಂಬುದು ಮಚಲೀಪಟ್ಟಣಕ್ಕೆ ೧೮ ಮೈಲಿಯಲ್ಲಿರುವ ಕೃಷ್ಣಾನದಿ ದಡದ ಕೂಚುಪುಡಿಯಲ್ಲಿ ಉಗಮವಾಯಿತು. ಇದೂ ಒಂದು ರೀತಿಯ ಭಕ್ತಿನಾಟ್ಯ. ವಿಜಯನಗರದ ಕಾಲದಲ್ಲಿ ಬಹು ಉಚ್ಛ್ರಾಯ ಸ್ಥಿತಿಯಲ್ಲಿದ್ದು ಆ ರಾಜ್ಯದ ಪತನವಾದ ಮೇಲೆ ಕ್ಷೀಣದೆಶೆಗೆ ಬಂದು ೧೭ ನೆಯ ಶತಮಾನದಿಂದೀಚೆಗೆ ಕೂಚುಪುಡಿ ನಾಟ್ಯಗಳೆಂದು ಪ್ರಸಿದ್ಧಿಯಾಗಿದೆ. ತಂಜಾವೂರಿನ ತೀರ್ಥನಾರಾಯಣ ಪಂಡಿತರು ಇದರ ಮೂಲ ಪುರುಷರು; ಇದು ಆಂಧ್ರಪ್ರದೇಶದಲ್ಲಿ ಹೆಚ್ಚು ಜನಪ್ರಿಯವಾಗಿದೆ. ಮಣಿಪುರ ನಾಟ್ಯವು ಮಣಿಪುರದ ಸುತ್ತಲೂ ಪ್ರಚಾರದಲ್ಲಿರುವ ನಾಟ್ಯಮಾರ್ಗ. ಪ್ರಾರಂಭದಲ್ಲಿ ಶಿವಪಾರ್ವತಿಯರ ನಾಟ್ಯವಿಷಯಕವಾಗಿತ್ತು. ಮುಂದೆ ಭಕ್ತಿಪಂಥ ಬೆಳೆದಂತೆಲ್ಲಾ ಕೃಷ್ಣವಿಷಯಕವಾಯಿತು–ಮಧ್ಯಕಾಲದಲ್ಲಿ ವಿಶೇಷ ಅವನತಿಗಿಳಿದು ೧೮ನೆಯ ಶತಮಾನದಲ್ಲಿ ರಾಜನಾಗಿದ್ದ ಭಾಗ್ಯಚಂದ್ರನಿಂದ ಪ್ರಚಾರಕ್ಕೆ ಬಂದಿತು. ರಾಸನೃತ್ಯವು ಪ್ರಾರಂಭವಾದುದು ಇವನಿಂದಲೇ. ವಸಂತ ರಾಸ, ಕುಂಜರಾಸ, ಕರ್ತಾರಾಸ, ನರ್ತರಾಸ, ದಿವಾರಾಸ, ಮತ್ತು ಮಹಾರಾಸ ಎಂಬ ಆರು ಋತು ಸಂಬಂಧವಾದ ರಾಸಗಳಿವೆ, ಮಿತವಾದ ಅಭಿನಯದಿಂದ ಭಕ್ತಿ ಪ್ರದರ್ಶನ ಮಾಡುವುದು ಇದರ ವೈಶಿಷ್ಟ್ಯ.

ಭರತನಾಟ್ಯವು ವಿಜಯನಗರದ ಕಾಲದವರೆಗೆ ಬಹು ಉಚ್ಛ್ರಾಯಸ್ಥಿತಿಯಲ್ಲಿತ್ತು, ಆಗ ಕಲಾವಿದರಿಗೆ ಪೂರ್ಣವಾದ ರಾಜಾಶ್ರಯವಿದ್ದಿತು. ಬೊಂಬೆಯಾಟದವನಿಗೆ ಸಾಳುವ ಕೃಷ್ಣದೇವರಾಯನು 1520 ರಲ್ಲಿ ದತ್ತಿ ಕೊಟ್ಟಿರುವುದನ್ನು ಒಂದು ಶಾಸನವು ಉಲ್ಲೇಖಿಸಿದೆ, ನೃತ್ಯ, ಕಾವ್ಯ, ಸಂಗೀತ, ಚಿತ್ರಕಲೆ, ಶಿಲ್ಪ ಇತ್ಯಾದಿಗಳಿಗೆ ಕೃಷ್ಣದೇವರಾಯನು ಕೊಡುತ್ತಿದ್ದ ಪ್ರೋತ್ಸಾಹ ವಿದೇಶೀಯರ ಮೆಚ್ಚುಗೆಗೆ ಪಾತ್ರವಾಗಿದೆ. ವಿಜಯನಗರದ ರಾಜ್ಯದ ಪತನದೊಡನೆಯೇ ಕಲೆಯ ಅವನತಿ ಪ್ರಾರಂಭವಾಯಿತೆನ್ನಬಹುದು. ನೃತ್ಯಕಲೆಗೆ ಆಶ್ರಯವಿತ್ತುದು ಧಾರ್ಮಿಕ ಸಂಸ್ಥೆಗಳಾದ ದೇವಾಲಯಗಳು, ಅದನ್ನು ಬೆಳೆಸಿಕೊಂಡು ಬಂದವರು ದೇವದಾಸಿಯರು, ಸಮಾಜದಲ್ಲಿ ಅವರ ಸ್ಥಾನಮಾನಗಳು ಉತ್ತಮವಾಗಿರುವವರೆಗೂ ಆ ಕಲೆಯು, ಶ್ರೇಷ್ಠಮಟ್ಟದಲ್ಲಿಯೇ ಇದ್ದಿತು. ಇತ್ತೀಚಿನವರೆಗೂ ಟಿ. ನರಸೀಪುರ, ಮುಳಬಾಗಿಲು, ಹೂವಾಡಿ ಮೊದಲಾದೆಡೆಗಳಲ್ಲಿ ದೇವದಾಸಿಯರ ಸೇವೆಯು ಅನಿವಾರ್ಯವಾಗಿದ್ದುದು ಸರ್ವವಿದಿತ. ದೇವದಾಸಿಯರಿಗೆ ಯೋಗ್ಯಶಿಕ್ಷಣವನ್ನು ಕೊಡುತ್ತಿದ್ದ ನಟುವರೂ, ಪಂಡಿತರೂ ಅನೇಕರಿರುತ್ತಿದ್ದರು. ಭಾವಪೂರ್ಣವಾಗಿ ಅಷ್ಟಪದಿಗಳನ್ನು ಹಾಡುತ್ತಿದ್ದ ಕಲಾವಿದರೂ ಗಣನೀಯವಾದ ಸಂಖ್ಯೆಯಲ್ಲಿರುತ್ತಿದ್ದರು.

ಈ ಕಲೆಯ ಜೀರ್ಣೋದ್ಧಾರಕ್ಕೂ ಮೈಸೂರರಸರೆ ಬಹುಮಟ್ಟಿಗೆ ಕಾರಣ. ಕಳೆದ ಶತಮಾನಗಳಲ್ಲಿ ಪ್ರಸಿದ್ಧರಾಗಿದ್ದ ಭರತನಾಟ್ಯಕಾರರಲ್ಲಿ ತಿರುಮಕೂಡಲಿನ ಸುಂದರಮ್ಮ ಮತ್ತು ಅವರ ಪುತ್ರಿಯಾದ ಚಂದ್ರವದನಮ್ಮ, ಪುಟ್ಟದೇವಮ್ಮ, ಮೂಗೂರು ತ್ರಿಪುರಸುಂದರಮ್ಮ, ಮೈಸೂರಿನ ಜಟ್ಟಿತಾಯಮ್ಮ, ಬೆಂಗಳೂರಿನ ನಾಗರತ್ನಮ್ಮ ಮೊದಲಾದವರನ್ನು ಹೆಸರಿಸಬಹುದು. ಇವರೆಲ್ಲರೂ ಮೈಸೂರರಸರ ಆಶ್ರಿತರು. ಅಲ್ಲದೆ ಇವರುಗಳೆನೇಕರಿಗೆ ಗುರುಪಟ್ಟದಲ್ಲಿದ್ದ ಕವೀಶ್ವರ ಗಿರಿಯಪ್ಪ, ಕಾಶೀಗುರುಗಳು, ಅಮೃತಪ್ಪ, ದಾಸಪ್ಪ ಮೊದಲಾದವರೂ ಮೈಸೂರು ಆಸ್ಥಾನದಿಂದ ಪರಿಪೋಷಿತರಾದವರು. ಇವರುಗಳಿಂದಲೂ ಇವರ ಶಿಷ್ಯರನೇಕರಿಂದಲೂ ಭರತನಾಟ್ಯ ಜೀವಂತವಾಗಿದೆ.

ಕರ್ನಾಟಕದ ಭರತನಾಟ್ಯವು ತಂಜಾವೂರ್ "ನದರ್" ನಾಟ್ಯಕ್ಕಿಂತ ಭಿನ್ನವಾದುದು. ಮೈಸೂರು ಪರಂಪರೆಯನ್ನು ಜಟ್ಟಿತಾಯಮ್ಮನವರೂ ಅವರ ಶಿಷ್ಯರಾದ ಎಸ್. ಎನ್. ಸ್ವಾಮಿ, ವೆಂಕಟಲಕ್ಷಮ್ಮನವರೂ, ಬೆಳೆಸಿಕೊಂಡು ಬಂದಿದ್ದಾರೆ. ಪಂದನಲ್ಲೂರ್ ಮೀನಾಕ್ಷಿ ಸುಂದರಂ ಅವರ ಪ್ರತಿಭೆಯಿಂದ ತಂಜಾವೂರ್ ಭರತನಾಟ್ಯಮಾರ್ಗ ಪುನರುಜ್ಜೀವನದ ಮೇಲೆ ರಾಮಗೋಪಾಲ್, ಉಭಯಂಕರ ಕೃಷ್ಣರಾವ್, ಚಂದ್ರಭಾಗಾದೇವಿ. ಮಾಯಾದೇವಿ ಮೊದಲಾದವರು ಹೊಸ ಪ್ರಯೋಗಗಳನ್ನು ನಡೆಸುತ್ತಿದ್ದಾರೆ. ಮೈಸೂರು ಪ್ರಾಚ್ಯಸಂಶೋಧನಾ ಸಂಸ್ಥೆಯಿಂದ ಪ್ರಕಟವಾಗಿರುವ "ಲಾಸ್ಯರಂಜನಿ" ಎಂಬ ಕನ್ನಡ ನಾಟ್ಯಶಾಸ್ತ್ರ ಗ್ರಂಥಕ್ಕೆ ಯು. ಎಸ್. ಕೃಷ್ಣರಾಯರೂ ಅವರ ಸಹಧರ್ಮಿಣಿಯವರಾದ ಚಂದ್ರಭಾಗಾದೇವಿಯವರೂ ತಮ್ಮ ಸೂಕ್ತ ಅಭಿನಯ ಭಂಗಿಗಳ ಛಾಯಾಚಿತ್ರವನ್ನು ಒದಗಿಸಿರುವುದು ನಾಟ್ಯಶಾಸ್ತ್ರಾಭ್ಯಾಸಿಗಳಿಗೆ ವಿಶೇಷ ಪ್ರಯೋಜನಕಾರಿಯಾಗಿದೆ.

ಈಚೆಗೆ ಭರತನಾಟ್ಯವು ಅಭಿವೃದ್ಧಿ ಸ್ಥಿತಿಗೆ ಬರುತ್ತಿದೆ. ಅನೇಕ ಕಲಾವಿದರ ಬೃಹತ್ಪ್ರಯತ್ನದಿಂದ ಅನೇಕ ನೃತ್ಯ ಸಂಸ್ಥೆಗಳು ಸ್ಥಾಪಿತವಾಗಿ ಅದರ ಸರ್ವತೋಮುಖವಾದ ಬೆಳವಣಿಗೆಗೆ ಕಾರಣವಾಗಿದೆ. ಮದರಾಸಿನ ಕಲಾಕ್ಷೇತ್ರದ

(31 ನೇ ಪುಟ ನೋಡಿ)

## ಕುಮಾರವ್ಯಾಸ ಚಿತ್ರಿಸಿದ
# ದ್ರೌಪದೀ ಸ್ವಯಂವರ

ಶ್ರೀಮತಿ ಎನ್. ಪುಷ್ಪ

ಕುಮಾರವ್ಯಾಸ ಭಾರತಕ್ಕೆ ಮೂಲ ಸಂಸ್ಕೃತದ ವ್ಯಾಸಮಹಾಭಾರತ. ಮೂಲ ಭಾರತವನ್ನು ತನ್ನ ಕೃತಿಗೆ ಆಕರವಾಗಿ ಹೊಂದಿದ ಮಾತ್ರಕ್ಕೆ ಕವಿ ತನ್ನ ಕೃತಿಯನ್ನು ಮೂಲದ ಪ್ರತಿಕೃತಿಯಾಗಿಸಿಲ್ಲ. ಕಥೆಯ ಚೌಕಟ್ಟಿನಲ್ಲಿ ಕುಮಾರವ್ಯಾಸ, ವ್ಯಾಸಭಾರತಕ್ಕೆ ಋಣಿಯಾಗಿದ್ದಾನೆಂಬ ಮಾತು ನಿಜ. ಕೃತಿರಚನೆಯ ಹಲವಾರು ಸಂದರ್ಭಗಳಲ್ಲಿ ವ್ಯಾಸ ಅವನಿಗೆ ಪ್ರೇರಕನಾಗಿರುವುದೂ ಸಾಧ್ಯ. ಆದರೂ, ಸ್ವತಃ ಉತ್ತಮ ಮಟ್ಟದ ಪ್ರತಿಭೆಯನ್ನು ಹೊಂದಿರುವ ಕುಮಾರವ್ಯಾಸ, ತನಗೆ ಬೇಕೆನಿಸಿದ ಕಡೆಗಳಲ್ಲೆಲ್ಲ ಸ್ವಾತಂತ್ರ್ಯವಹಿಸಿ, ಮೂಲಕಥೆಯನ್ನು ತನಗೆ ಬೇಕಾದಂತೆ ಮಾರ್ಪಡಿಸಿಕೊಂಡಿದ್ದಾನೆ. ಸಂಕ್ಷಿಪ್ತಗೊಳಿಸಿದ್ದಾನೆ, ಬೇಡದ್ದನ್ನು ತ್ಯಜಿಸಿದ್ದಾನೆ. ಕೃತಿಯಲ್ಲಿ ಹೊಸತನವನ್ನು ತೋರಿಸಿ ತನ್ನ ಪ್ರತಿಭಾ ಸಾಮರ್ಥ್ಯವನ್ನು ಮೆರೆದಿದ್ದಾನೆ. ಕೆಲವೆಡೆಗಳಲ್ಲಂತೂ ಕುಮಾರವ್ಯಾಸನ ಪ್ರತಿಭೆ ಮೂಲಕ್ಕಿಂತ ಸುಂದರವಾಗಿ ಹೊರಹೊಮ್ಮುತ್ತದೆ. ಈ ಮಾತಿಗೆ ಕವಿ ಚಿತ್ರಿಸಿರುವ "ದ್ರೌಪದೀ ಸ್ವಯಂವರ" ಪ್ರಸಂಗವು ಒಂದು ಉದಾಹರಣೆಯಾಗುತ್ತದೆ.

ಬಕಾಸುರನ ವಧೆಯಾದನಂತರವೂ ಏಕಚಕ್ರನಗರದಲ್ಲೇ ತಂಗಿದ್ದ ಪಾಂಡವರಿಗೆ ತ್ರಿಲೋಕಸುಂದರಿಯಾದ ದ್ರುಪದಾತ್ಮಜೆಯ ವಿವಾಹದ ಸಿದ್ಧತೆ ಪಾಂಚಾಲನಗರದಲ್ಲಿ ಭರದಿಂದ ನಡೆಯುತ್ತಿದೆಯೆಂಬ ವಿಚಾರ ಬ್ರಾಹ್ಮಣನೊಬ್ಬನಿಂದ ತಿಳಿಯಿತು. ದ್ರೌಪದಿಯ ರೂಪಲಾವಣ್ಯಗಳನ್ನು ಕೇಳಿ ತಿಳಿದಿದ್ದ ಪಾಂಡವರಿಗೆ, ದ್ರೌಪದಿಯ–ಸ್ವಯಂವರದಲ್ಲಿ ತಾವೂ ಪಾಲ್ಗೊಳ್ಳಬೇಕೆಂದು ಮನಸ್ಸಾಯಿತು. ಆದ್ದರಿಂದ ಕುಂತಿಯೊಡಗೂಡಿ ದ್ರುಪದನಗರವನ್ನು ಪ್ರವೇಶಿಸಿದರು.

ಸಕಲ ದೈವಜ್ಞರಲ್ಲಿ, ಉಪಶ್ರುತಿಗಳಲ್ಲಿ, ಋಷಿಪರಮ ಸಿದ್ಧಾಂತದಲ್ಲಿ ಮಂತ್ರಾವೇಶವಚನದಲ್ಲಿ ಧರಣಿಯೊಳಗೆ ಈಗಲೂ ಪಾಂಡವರ ಸಂಚರಣೆಯುಂಟು, ಅವರು ಅರಗಿನ ಮನೆಯಲ್ಲಿ ಬೆಂದಿಲ್ಲವೆಂಬ ವಿಷಯವನ್ನು ತಿಳಿದಿದ್ದ ದ್ರುಪದನಾದರೋ, ತನ್ನ ಮಗಳಿಗೆ ಪುಣ್ಯವಶದಿಂದ ಅರ್ಜುನ ವರನಾಗಿ ಒದಗಿದರೆ ಸಾಕೆಂದು ದೈವವನ್ನು ಸ್ಮರಿಸುತ್ತ ದ್ರೌಪದಿಗೆ ಸ್ವಯಂವರವನ್ನೇರ್ಪಡಿಸಿದ. "ಧರೆಯ ಕನ್ಯಾಜನ ಶಿರೋಮಣಿ"ಯ ಸ್ವಯಂವರಕ್ಕೆ ಅರಸುಗಳು ಬರಬೇಕೆಂದು ಸಮಸ್ತ ಭೂಮಿಶ್ವರರಿಗೂ ದೂತರ ಮೂಲಕ ಆಹ್ವಾನವಿತ್ತ. ಈ ವಿಷಯವನ್ನು ತಿಳಿದದ್ದೇ, "ಮೂಡಿಪರೆ ಶತಯಾಗವನು ಕೈಗೂಡುವಳು ಶಚಿ, ಮುಖಸಹಸ್ರವ ಮಾಡಿ ಮೇಣ್ ಜನಿಸಿದೊಡೆ ಬಹಳೇ ದ್ರೌಪದಾದೇವಿ ನೋಡುವೆವು ನಡೆ ಜನ್ಮಶತದಲಿ ಕೂಡಿ ಕೊಬ್ಬಿದ ಪುಣ್ಯಫಲ ಕೈಗೂಡುವುದೊ ತನ್ನೆನೆನುತ" ಸಕಲ ಭೂಮಿಪರು ದ್ರುಪದ ಪಟ್ಟಣಕ್ಕೆ ನೆರೆಯತೊಡಗಿದರು. ಸ್ವಯಂವರಕ್ಕೆಂದು ದ್ರುಪದನಗರಿಗೆ ಬಂದಿದ್ದ "ಭೂಮಿಪೇಶ್ವರರ ಚತುರಂಗ ಪದಹತ ಧರಣಿ ನಿರ್ಗತರೇಣು ಪಟಲ ಪರಾಗವಂ"ದೆಂಬ ಸಮಸ್ತ ಭೂಮಂಡಲವೂ ಅರುಣಮಯವಾಯಿತಂತೆ. ಹೇ[illegible]ರೆ ಸರಸಿಜಾಕ್ಷಿ ದ್ರೌಪದಿಯನ್ನು ನೆನೆದು ನಭಚರಾಚರದ ಮುಖದಲಿ ರಾಗರಸ ಉಬ್ಬರಿಸಿದಂತೆ.

ದ್ರೌಪದೀಸ್ವಯಂವರದಲ್ಲಿ ಪಾಲ್ಗೊಳ್ಳಲು ಆಗಮಿಸಿದ ಸಮಸ್ತ ಅತಿಥಿಗಳಿಗೂ, ದ್ರುಪದ, ಅನುರವರ ಸ್ಥಾನಮಾನಗಳಿಗೆ ತಕ್ಕಂತೆ "ಬಿಡಾರಿಗಳು, ನೆಲಮನೆಗಳು. ಮಾಡಿಸಿರಮನೆಯುಪರಿಗಳು, ಕರುಮಾಡವಿವರಗಳು" ಇತ್ಯಾದಿಯಾಗಿ ಬೀಡುಗಳನ್ನು ನಿರ್ಮಿಸಿ ಅನುಕೂಲ ಮಾಡಿಕೊಟ್ಟಿದ್ದಾನೆ

ದ್ರೌಪದಿಯ ಸ್ವಯಂವರವೆಂದಮೇಲೆ ಕೇಳಬೇಕೆ? ಪಾಂಚಾಲನಗರವನ್ನು ವೈಭವದಿಂದ ಅಲಂಕರಿಸುವ ಸಿದ್ಧತೆ ಉತ್ಸಾಹದಿಂದ ನಡೆದಿತ್ತು. ಮೂಲ ಮಹಾಭಾರತದಲ್ಲೂ ದ್ರೌಪದೀ ಸ್ವಯಂವರ ಸಿದ್ಧತೆಯ ಚಿತ್ರವಿದೆ. ಆದರೆ ಕುಮಾರವ್ಯಾಸ ಚಿತ್ರಿಸಿರುವಷ್ಟು ವರ್ಣನೆಯ ವೈಭವ ಅಲ್ಲಿಲ್ಲ. ಕುಮಾರವ್ಯಾಸ ಈ ಸಂದರ್ಭವನ್ನು ಮೂಲಕ್ಕಿಂತ ದೀರ್ಘವಾಗಿ—ದೀರ್ಘವಾಗಿದ್ದರೂ ಸುಂದರವಾಗಿ – ಚಿತ್ರಿಸಿದ್ದು, ಸ್ವಯಂವರದ ವೈಭವಕ್ಕೆ ತಕ್ಕ ಹಿನ್ನೆಲೆಯನ್ನು ಒದಗಿಸಿದ್ದಾನೆ.

ಪಾಂಚಾಲನಗರದ ಕೇರಿ ಕೇರಿಯ ಬೀದಿಗಳನ್ನೂ ಪನ್ನೀರಿಂದ ತಳಿಸಿ, ಸ್ವಚ್ಛಗೊಳಿಸಿ ಮುತ್ತು ರತ್ನಗಳ ಕನ್ನಡಿಗಳ ತೋರಣಗಳಿಂದ ಅಲಂಕರಿಸಿದರು. ಕರ್ಪೂರ, ಹೊಂಬಾಳೆ ಶ್ರೀಗಂಧದಂತಹ ಅತ್ಯಂತ ಬೆಲೆ ಬಾಳುವ ಮರಗಳ ಕಂಬಗಳನ್ನು ಸಾಲಾಗಿ ನೆಟ್ಟು, ಅದರಮೇಲೆ ದಿವ್ಯ ಚಿತ್ರದಿಂದ ಕೂಡಿದ ವಿಧವಿಧದ ರೇಶ್ಮೆಯ ಬಟ್ಟೆಗಳನ್ನು ಹೊದಿಸಿ, ಎರಡು ಯೋಜನದಷ್ಟು ಉದ್ದದ ಚಪ್ಪರವನ್ನು ನಿರ್ಮಿಸಿದ್ದರು. ನಗರದ ವೈಭವಯುತವಾದ ಅಲಂಕಾರ ಹಾಗಿರಲಿ, ಇಡೀ ನಗರದಲ್ಲೆಲ್ಲ ಹರಡಿದ್ದ "ಅಗರು ಧೂಮಾವಳಿಯ ಕಂಪಿನಲಿ ಮೇಘವಾಹನನೇ! ಮಘಮಘಿಸಿದುದು". ಬೀದಿಗಳಲ್ಲಿ ಸುಂದರವಾಗಿ ಸಿಂಪಡಿಸಿದ್ದ ಪನ್ನೀರು ಹಾಗೂ ಕೆದರಿಡುವ ಕಸ್ತೂರಿಗಳ ಪಟ್ಟವಾದ ಪರಿಮಳದ ಭಾರವನ್ನು ತಡಿಯದೆ ಬಿರುಗಾಳಿಯೇ ಕುಸಿಯಿತಂತೆ. ಪಾಂಚಾಲನಗರವೇ ಇಷ್ಟೊಂದು ರಮ್ಯವಾಗಿ ಅಲಂಕೃತವಾದಮೇಲೆ ದ್ರೌಪದಿಯ ವಿವಾಹಮಂಟಪದ ಅದ್ಭುತ ವರ್ಣಿಸಲಸದಳ. "ಹೊಳೆವ ಛತ್ರದ ಸಾಲಭಂಜಿಕೆಗಳಲ್ಲಿ ಮೌಕ್ತಿಕ ವಜ್ರಮಣಿಮಯಂಗಳ ಮಹಾರಶ್ಮಿಯಲಿ, ರಚನೆಯ ಚಿತ್ರಪತ್ರದಲಿ ಇಳೆಗಿಳಿದ ಪುಷ್ಪಕವೊ, ನೂತನ ಪಳಿನ ಮಿತ್ರನ ರಥವೊ ಮೇಣ್ ಇದು ಜಲಧಿಶಯನನ ಸಜ್ಜೆಯೊ ಅರಿಯೆವು" ಎಂಬಂತಿತ್ತು.

ಸ್ವಯಂವರ ಮಂಟಪದ ವಿವಿಧ ಕಡೆಗಳಲ್ಲಿ ನಡೆಯುತ್ತಿದ್ದ ವಿವಿಧ ವೀಣಾವಾದ್ಯಗಳ ರವ, ಮೃದಂಗ ತಂತಿಗಳುರವಣೆ,ಉತ್ಸಾಹ ಸಡಗರಗಳಿಂದ ಕೂಗುತ್ತ ನೃತ್ಯಮಾಡುತ್ತಿದ್ದ ನರ್ತಕರ ನರ್ತನ, ವರ ಭೂಷಣಗಳಿಂದ ಅಲಂಕೃತಗೊಂಡಿದ್ದ ಯುವತಿಯರ ಸಡಗರದ ಮಾತುಕತೆಗಳಿಂದ ಇಡೀ ಚಪ್ಪರದ ಸಂಭ್ರಮದ ವಾತಾವರಣ ಮತ್ತಷ್ಟು ಹೆಚ್ಚಿತ್ತು. ದ್ರೌಪದಿಯ ಸ್ವಯಂವರಕ್ಕೆ ಪ್ರೇಕ್ಷಕರಾಗಿ ಕವಿ, ಗಮಕಿ, ವಾದಿ, ವಾಗ್ಮಿಗಳೇ ಮೊದಲಾದ ಕಲಾವಿದರು, ಮುನಿಶ್ರೇಷ್ಠರು, ವಿವಿಧ ವರ್ಣಾಶ್ರಮಧರ್ಮ ವ್ಯವಹಾರಿಣ ನಿಷ್ಠರು, ವಿದ್ಯಾಧರ, ಮಹೋರಗ, ಯಕ್ಷ ರಾಕ್ಷಸ ಗರುಡ ಕಿನ್ನರ ಮೊದಲಾದ ಎಲ್ಲ ಪ್ರಕಾರದ ದೇವತೆಗಳು ನೆರೆದಿದ್ದರು. ಇದಕ್ಕೆಲ್ಲ ಕಳಶಪ್ರಾಯವಾಗಿ ಚಾರಣರ ಕೈವಾರ, ತುಂಬುರುನಾರದರ ಸಂಗೀತ, ರಂಭೆಯ ಸುಂದರನರ್ತನ, ಚಿತ್ರರಥನ ಮೃದಂಗ ಇಡೀ ಸಭೆಗೇ ಮೆರಗು ನೀಡಿ ಜಂಬಾರಿಯ ಓಲಗವನ್ನೇ ನೆನಪಿಸುತ್ತಿತ್ತು. ದ್ರುಪದನೇನೊ ಸಕಲ ಸಿದ್ಧತೆಗಳನ್ನು ಅದ್ಭುತವಾಗಿ ಮಾಡಿದ. ಆದರೆ ಆತನನ್ನು ಆಳವಾಗಿ ಕಾಡುತ್ತಿದ್ದ ಯೋಚನೆ ಒಂದೇ; "ಪ್ರಚುರಮಣಿಯಿದೆ ಪದ್ಮರಾಗದ ರುಚಿರತ್ನವು ಜಾತರೂಪದಿ ಖಚಿತವಾದೊಡೆ ಪುಣ್ಯ." ದ್ರೌಪದಿಗೆ ತಕ್ಕ ವರ ಸಿಗಬೇಕಲ್ಲ ಎಂಬುದೇ ಅವನ ಚಿಂತೆ.

ದ್ರೌಪದಿಯ ಸ್ವಯಂವರದ ಮೊದಲದಿನವೇ ದ್ರುಪದ ನಾಳೆ "ಮಹಿಳಾಶಿರೋಮಣಿ ಪರಮ ಸೌಭಾಗ್ಯದ ಸಮುದ್ರಸಿರಿಯ ಪರಿಣಯ", "ಮನ್ಮಥನ ಕಾಳೆಗದ ಖಾಡಾಖಾಡಿ" ಎಂಬುದಾಗಿ ಎಲ್ಲ ಪಾಳೆಯಗಳಲ್ಲೂ ಡಂಗೂರ ಹೊಡೆಸಿದ. ಸಕಲ ಪೃಥ್ವೀಶ್ವರರಿಗೂ ದ್ರೌಪದಿ ತಮಗೇ ಸಿಗಬೇಕೆಂಬ ಆಸೆ. ಆದ್ದರಿಂದ ತಮ್ಮ ಇಷ್ಟದೈವಗಳನ್ನು ದ್ರೌಪದಿಗಾಗಿ ಪ್ರಾರ್ಥಿಸಿ, ಕಾಣಿಕೆಯನ್ನೊಪ್ಪಿಸಿ ಸಡಗರದಿಂದ ಸ್ವಯಂವರ ಮಂಟಪಕ್ಕೆ ಆಗಮಿಸಿ, ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತರು. ಕೌರವರಾದಿಯಾಗಿ ಎಲ್ಲ ರಾಜರಿಗೂ, ಚೆಲುವು, ಸಿರಿ, ಯೌವನ, ಪರಾಕ್ರಮಗಳಲ್ಲಿ ತಮ್ಮನ್ನು ಯಾರಾದರೂ ಮೀರಿಸಿಬಿಟ್ಟಾರೆಂದು ಅಲ್ಲಲ್ಲೆ ಅಸೂಯೆ ಅಳುಕು. ದ್ರೌಪದಿ ಎಲ್ಲಿ ತಮ್ಮ ಕೈತಪ್ಪುವಳೋ ಎಂದು ಭಯ.

ಮುಂದೆ ದ್ರೌಪದಿ ಸ್ವಯಂವರ ಮಂಟಪವನ್ನು ಪ್ರವೇಶಿಸುವ ಚಿತ್ರ. ಈ ಚಿತ್ರ ಮೂಲಮಹಾಭಾರತದಲ್ಲಿ ಅತ್ಯಂತ ಸಂಕ್ಷಿಪ್ತವಾಗಿ ಬಂದಿದೆ. ಅಲ್ಲಿ ಬಂದಿರುವುದಿಷ್ಟೇ: ಸಮಸ್ತರಾಜರೂ, ದೇವತೆಗಳೂ, ಜನಸಮೂಹವೂ ದಿನೇ ದಿನೇ ನೆರೆದು ಹದಿನಾರನೆಯದಿನಕ್ಕೆ ಸ್ವಯಂವರ ಮಂಟಪ ಸಮುದ್ರೋಪಾದಿಯಲ್ಲಿ ತುಂಬಿಹೋಗಿತ್ತು. ಅಂದು ಮಂಗಳಸ್ನಾನಮಾಡಿ, ಸರ್ವಾಭರಣ ಭೂಷಿತಳಾದ ದ್ರೌಪದಿ, ಪೀತಾಂಬರವನ್ನುಟ್ಟು, ಸ್ವರ್ಣಮಯ ಜಯಮಾಲೆಯನ್ನು ಹಿಡಿದು ಅಣ್ಣ ಧೃಷ್ಟದ್ಯುಮ್ನನೊಂದಿಗೆ ಸ್ವಯಂವರ ಮಂಟಪವನ್ನು ಪ್ರವೇಶಿಸಿದಳು. (ಆಪ್ಲುತಾಂಗೀ ಸುವಸನಾ, ಸರ್ವಾಭರಣಭೂಷಿತಾ ವೀರಕಾಂಸ್ಯಮುಪಾದಾಯ ಕಾಂಚನಂ ಸಮಲಂಕೃತಮ್ ಅವತೀರ್ಣಾ ತತೋ ರಂಗಂ ದ್ರೌಪದೀ ಭರತರ್ಷಭ.) ಆದರೆ ಕುಮಾರವ್ಯಾಸ ಇದನ್ನೇ ಸುಮಾರು ಒಂದು ಸಂಧಿಯಷ್ಟು ಬೆಳೆಸಿದ್ದಾನೆ. ದ್ರೌಪದಿಯ ಸೌಂದರ್ಯವರ್ಣನೆಗೇ ಹದಿನೆಂಟು ಪದ್ಯಗಳನ್ನು ಮೀಸಲಿಟ್ಟಿದ್ದಾನೆ. ಇದರೊಂದಿಗೆ ದ್ರೌಪದಿಯ ಸಖಿಯರ ಶೃಂಗಾರವರ್ಣನೆ, ಸಖಿಯರೊಂದಿಗೆ ದ್ರೌಪದಿ ಸ್ವಯಂವರ ಮಂಟಪವನ್ನು ಪ್ರವೇಶಿಸುವಿಕೆ, ಇದರಿಂದ ಅಲ್ಲಿ ನೆರೆದಿದ್ದ ರಾಜರು, ದೇವತೆಗಳು ಹಾಗೂ ಇತರರ ಮೇಲಾದ ಪರಿಣಾಮ–ಇತ್ಯಾದಿಗಳನ್ನು ಕವಿ ಸೊಗಸಾಗಿ, ದೀರ್ಘವಾಗಿ ಚಿತ್ರಿಸಿದ್ದಾನೆ. ಇಲ್ಲೆಲ್ಲ ಕುಮಾರ ಕುಮಾರವ್ಯಾಸನ ಪ್ರತಿಭೆ ಮಿಂಚಿ ನಮ್ಮ ಗಮನ ಸೆಳೆಯುತ್ತದೆ.

ಸ್ವಯಂವರ ಮಂಟಪವನ್ನು ಪ್ರವೇಶಿಸುವ ಮೊದಲು, ದ್ರುಪದನ ಅಪ್ಪಣೆಯ ಮೇರೆಗೆ ದ್ರೌಪದಿಯನ್ನು ಶತಸಾವಿರ ನಿತಂಬಿನಿಯರು, ತಮ್ಮ ಕೌಶಲ್ಯವನ್ನೆಲ್ಲ ಪ್ರಯೋಗಿಸಿ ಅಲಂಕರಿಸಿದರಂತೆ. ದ್ರೌಪದಿ ಮೊದಲೇ ಚೆಲುವಿನ ಕಣಿ. ಇನ್ನು ಅವಳಿಗೆ ಅಲಂಕಾರ ಮಾಡಿದರೆ ಹೇಳಲೇಬೇಕಿಲ್ಲ. ಆಕೆಯ ಸೌಂದರ್ಯವನ್ನು ಕವಿ ಉತ್ಪ್ರೇಕ್ಷಿಸುವ ಬಗೆಯಿದು. ಆಭರಣಗಳು ಅವಳ ಅವಯವಗಳ ಸೌಂದರ್ಯವನ್ನು ಹೆಚ್ಚಿಸುವುದಿರಲಿ, ಅವಳ ಅಂಗಾಂಗಗಳ ಮೇಲೆ ಧರಿತವಾಗಿರುವುದರಿಂದ ಅವುಗಳ ಕಾಂತಿಯೇ ಮತ್ತಷ್ಟು ಹೆಚ್ಚಿತಂತೆ. ನಯನ ಮನೋಹರಿಯಾದ ದ್ರೌಪದಿಯ ಸೌಂದರ್ಯದ ಚಿತ್ರವಿದು; "ಸರಸಲಾವಣ್ಯಾಂಬು–ಮಯ ತನು ಸರಸಿಯಲಿ ಮುಳುಗಿರ್ದ ಯೌವನ ಕರಿಯ ಕುಂಭಸ್ಥಳವೊ ವಿಪುಳ ಪಯೋಧರ ದ್ವಯವೊ ಶಫರಿಗಳೊ ತಾವರೆಯೊ ಮುಖವೋ ತುಂಬಿಗಳೊ ನಿರಿಗುರುಳುಗಳೊ ಮಣಿಗಣವೊ ರದನವೊ ಚಿತ್ರವಾಯ್ತೆಂದ". ಮನ್ಮಥ ಸೃಷ್ಟಿ ಎಂಬಂತಿದ್ದ ಪಾಂಚಾಲಿಯ ಯೌವನ "ವರ ವಸಂತನ ಬರವು, ಜಾತಿಯ ಬಿರಿಮುಗುಳು, ಮರಿದುಂಬಿಗಳ ನಯಪರದ ದನಿ, ಕರಿಕಳಭಲೀಲೆ ನವೇಕ್ಷುರಸಧಾರೆ ಮೆರೆವವೋಲೆ" ಇದ್ದು ನೋಡುವವರ ಕಣ್ಣನ್ನ ಕುಕ್ಕಿಸುವಂತಿತ್ತು.

ಸರ್ವಾಲಂಕಾರ ಭೂಷಿತೆಯಾದ ದ್ರೌಪದಿ, ಸಖಿಯರಿಂದೊಡಗೂಡಿ ಸ್ವಯಂವರ ಶಾಲೆಯನ್ನು ಪ್ರವೇಶಿಸುತ್ತಾಳೆ. ಆಕರ್ಷಕವಾಗಿ ಶೃಂಗರಿಸಿಕೊಂಡಿದ್ದ ಸಖಿಯರನ್ನೂ ಅವರ ನಡುವೆ ದಂಡಿಗೆಯಲ್ಲಿ ಕುಳಿತಿದ್ದ ದ್ರೌಪದಿಯನ್ನೂ ಕಂಡು ಮಂತ್ರಮುಗ್ಧರಾದ ರಾಜರ ಚಿತ್ರವಿದು: "ಹೊಳೆವ ಕಂಗಳ ಬೆಳಗಿನಲಿ ಕತ್ತಲಿಸಿದವು ಕಾಮುಕರ ಮುಖ, ತನುವಳಯ ಕಾಂತಿಯ ತಂಪಿನಲಿ ಬಾಡಿದವು ಬುದ್ಧಿಗಳು, ಲಲಿತ ವಿಭ್ರಮದಿಂದಹಂಕೃತಿ ಶಿಲೆಗಳೊಡೆದವು ಮೋಹನದ ಹೊಯ್ಲೊಳಗೆ ಹೊಳೆದಡಗಿದವು ಚಿತ್ತ ಮಹಾಮಹೀಶ್ವರರ".

ಚೆಲುವಿಕೆಯ ಚೈತನ್ಯ, ಪರಿಮಳದ ಪುತ್ಥಳಿ, ಲತಾಂಗಿಯ ಸುಳಿವು, ಲಾವಣ್ಯೈಕರಸ ಸಾಕಾರ ವಿಭ್ರಮ, ಲಲಿತ ಶೃಂಗಾರಾಬ್ಧಿ ಮಥನೋ–ಚ್ಚಲಿತಸುಧೆ" ಎಂಬಂತೆ ದೇವತೆಗಳಿಗೆ ಕಂಡ ದ್ರೌಪದಿಯನ್ನು ದೇವೇಂದ್ರ ವರ್ಣಿಸುವ ರೀತಿ ಇದು: "ಈಕೆಯಂದುದಿಸಿದರೆ ಮದನಂಗೇಕೆ ದೇಹತ್ಯಾಗವಹುದು, ಪಿನಾಕಿ ತಾ ವೈರಾಗ್ಯದಲಿ ಹೋಗುವನೆ, ತಪೋವನವ ಸಾಕು ಗೌತಮ ಮುನಿಯ ಮುಳಿಸಿನ ಕಾಕುನುಡಿ ಫಲಿಸುವುದೆ ಯೆನುತ ಆ ನಾಕಪತಿ ರಂಭಾದಿ ಸತಿಯರ ನೋಡಿದನು ನಗುತ".

ಮುಂದೆ, ದಂಡಿಗೆಯಲ್ಲಿ ಕುಳಿತು ಸ್ವಯಂವರ ಮಂಟಪವನ್ನು ಪ್ರವೇಶಿಸಿದ ದ್ರೌಪದಿಗೆ, ಅವಳ ಅಣ್ಣನಾದ ಧೃಷ್ಟದ್ಯುಮ್ನ ಅಲ್ಲಿ ನೆರೆದಿದ್ದ ರಾಜರ ಪರಿಚಯ ಮಾಡಿಕೊಡುತ್ತಾನೆ. ಮೂಲದಲ್ಲೂ ಈ ಸಂದರ್ಭವಿದೆ. ಆದರೆ ಅಮುಖ್ಯವಾಗಿದೆ. ಕುಮಾರವ್ಯಾಸನ ಈ ಸಂದರ್ಭ ಮೂಲಕ್ಕಿಂತ ಆಕರ್ಷಕವಾಗಿದೆ. ಇದಕ್ಕೆ ಕಾರಣವೂ ಇಲ್ಲದಿಲ್ಲ. ಮೂಲದಲ್ಲಿ ವ್ಯಾಸ ದ್ರೌಪದಿಗೆ ತನಗಿಷ್ಟಬಂದ ರಾಜರನ್ನು ವರಿಸುವ ಸ್ವಾತಂತ್ರ್ಯವನ್ನು ಕೊಟ್ಟಿಲ್ಲ. ಅರ್ಜುನನನ್ನು ಪಡೆಯುವ ಸಲುವಾಗಿಯೇ, ಅವನಿಗೆ ಮಾತ್ರ ಬೇಧಿಸಲಾಗುವಂತಹ ಧನುಸ್ಸನ್ನು ಎಲ್ಲರಾಜರ ಮುಂದಿಟ್ಟು, ದ್ರೌಪದಿ ಸ್ವಯಂವರಮಂಟಪವನ್ನು ಪ್ರವೇಶಿಸಿದೊಡನೆ, ಎಲ್ಲ ರಾಜರನ್ನೂ ಕುರಿತು ಧೃಷ್ಟದ್ಯುಮ್ನ "ಇದಂ ಧನುರ್ಲಕ್ಷ್ಯಾಮಿ ಮೇಚ ಬಾಣಾಃ ಶೃಣ್ವಂತು ಮೇ ಪಾರ್ಥಿವಾಃ ಸರ್ವಏವ। ಯನ್ತ್ರಚ್ಛಿದ್ರೇಣಾಭ್ಯತಿಕ್ರಮ್ಯ ಲಕ್ಷ್ಯಂ ಸುದುಷ್ಕರಂ ಯಃ ಕುಲೇನ ರೂಪೇಣ ಬಲೇನ ಯುಕ್ತಃ। ತಸ್ಯಾದ್ಯ ಭಾರ್ಯಾ ಭಗಿನೀ ಮಮೇಯಂ ಕೃಷ್ಣಾ ಭವಿತ್ರೀ ನ ಮೃಷಾ ಬ್ರವೀಮಿ -ಎಂದು ಘೋಷಿಸುತ್ತಾನೆ. ನಂತರ ದ್ರೌಪದಿಗೆ ಅಲ್ಲಿ ನೆರೆದಿರುವ ರಾಜರೆಲ್ಲರ ಹೆಸರನ್ನು ನೆಪಮಾತ್ರಕ್ಕೆಂಬಂತೆ ಉದ್ದಕ್ಕೂ ಪರಿಚಯಿಸುತ್ತ ಹೋಗುತ್ತಾನೆ. ವ್ಯಾಸನಲ್ಲಿ ಬಲಪರೀಕ್ಷೆಯಲ್ಲಿ ಗೆದ್ದವರು ದ್ರೌಪದಿಗೆ ವರನೇ ಹೊರತು ದ್ರೌಪದಿ ಆರಿಸುವಂತಿಲ್ಲ. ಆದರೆ ಕುಮಾರವ್ಯಾಸ ದ್ರೌಪದಿಗೆ ಸ್ವಯಂವರದ ಸ್ವಾತಂತ್ರ್ಯವನ್ನು ನೀಡಿದ್ದಾನೆ. ಇದರಿಂದ ದ್ರೌಪದಿಗೆ ಧೃಷ್ಟದ್ಯುಮ್ನ "ಇಂಗಿತದ–ಲವರಂತರಂಗವನಂಗವಟ್ಟಿದ ಬಳಕೆಯನು ಬಹಿರಂಗದಲಿ ನೀನರಿ" ಎಂದು ಹೇಳಿ, ರಾಜರನ್ನು ಪರಿಚಯಿಸುವಾಗ, ದ್ರೌಪದಿ ತೋರಿದ ಪ್ರತಿಕ್ರಿಯೆ, ರಾಜರ ಪ್ರತಿಕ್ರಿಯೆ ಇತ್ಯಾದಿಗಳನ್ನು ಸ್ವಾರಸ್ಯಮಯವಾಗಿ, ಆಹ್ಲಾದಕಾರಿಯಾಗಿ ಚಿತ್ರಿಸಲು ಕುಮಾರವ್ಯಾಸನಿಗೆ ಸಾಧ್ಯವಾಗಿದೆ. ದ್ರೌಪದಿ ಯಾರನ್ನೂ ಒಪ್ಪದಿದ್ದಾಗ ಮಾತ್ರ ದ್ರುಪದ ಮತ್ಸ್ಯಯಂತ್ರಭಂಗ ಪರೀಕ್ಷೆಯನ್ನು ಇಡುತ್ತಾನೆ.

ದ್ರೌಪದಿಗೆ ರಾಜರನ್ನು ಪರಿಚಯಿಸುವಾಗ ಅಲ್ಲಿದ್ದ ರಾಜರ ಮನಃಸ್ಥಿತಿ, ಪ್ರತಿಕ್ರಿಯೆಗಳ ಚಿತ್ರ ಕುಮಾರವ್ಯಾಸನಲ್ಲಿ ಸೊಗಸಾಗಿದೆ. ದ್ರೌಪದಿಯ ದಂಡಿಗೆ ಒಬ್ಬೊಬ್ಬರಾಜರನ್ನೂ ಬಿಟ್ಟು ಮುಂದೆ ಹೋದಂತೆ, ಅವರ ದೇಹಮಾತ್ರ ಅಲ್ಲಿ ಇದ್ದು, ಇಂದ್ರಿಯಗಳೆಲ್ಲ ದ್ರೌಪದಿಯನ್ನೇ ಹಿಂಬಾಲಿಸುತ್ತಿದ್ದುವಂತೆ. ಆ ರಾಜರ ಸ್ಥಿತಿಯಿದು: "ಮಡಿಸಿದೆಲೆ ಬೆರಳೊಳಗೆ, ಬಾಯೊಳಗಡಸಿದೆಲೆ ಬಾಯೊಳಗೆ, ಸಚಿವರ ನುಡಿಯಕೇಳರು, ಸುಳಿಯ ಕಾಣರು ಲೋಚನಾಗ್ರದಲಿ, ಕಡುಮುಳಿದ ಕಂದರ್ಪ ಶರವವಘಡಿಸಿ ಕೈಗಳನೋಡಿ ನೃಪರಿವೆ ಮಿಡುಕದಿರ್ದರು ಬೆರಳಮೂಗಿನ ಹೊತ್ತು ದುಗುಡದಲಿ". ಮೈಮೇಲೆ ಎಚ್ಚರವಿಲ್ಲದ ರಾಜರ ಚಿತ್ರ ಇಲ್ಲಿ ಚಿತ್ರವತ್ತಾಗಿ, ಅತ್ಯಂತ ಸಹಜವಾಗಿದೆ. ದ್ರೌಪದಿ ಕೌರವಾದಿಯಾಗಿ ವಿರಾಟ,

ಶ್ವೇತಾಯುಧ, ಪಾಂಡ್ಯ, ಚೋಳ, ಚೇರ ಮೊದಲಾದ ಯಾವರಾಜರನ್ನೂ ಕಣ್ಣೆತ್ತಿಯೂ ನೋಡದಾಗ, ಧೃಷ್ಟದ್ಯುಮ್ನ ಅವಳನ್ನು ಕರ್ಣನ ಬಳಿ ಕರೆತರುತ್ತಾನೆ. ಆಗ ಕವಿ ಮನನೀಯವಾದ ಒಂದು ಮಾತನ್ನು ಹೇಳಿದ್ದಾನೆ: "ಭಾವಾತಿಶಯ ಸಂಬಂಧ ಭಾವದೊಳೀತನನು ನೋಡಿದಳು, ತಿರುಹಿದಳಬಳಿ ಲೋಚನವ". ಮುಂದೆ ತನಗೆ ಪತಿಯಾಗಲಿರುವ ಅರ್ಜುನನ ಹಿರಿಯಣ್ಣ ಈತ ಎಂಬ ಭಾವ ಆಕೆಯ ಮನದಲ್ಲಿ ಉದಿಸಿರಬೇಕು. ಧೃಷ್ಟದ್ಯುಮ್ನ ಕೃಷ್ಣನನ್ನು ಪರಿಚಯಿಸಿದಾಗ, ದ್ರೌಪದಿಗೆ ಆತನಲ್ಲಿ ದೈವ, ಗುರುವೆಂಬ ಪೂಜ್ಯ ಭಾವ ಭಕ್ತಿ ಭಾವಮೂಡಿತಷ್ಟೆ. ಆಕೆಗೆ ಬೇಕಾಗಿದ್ದವನು ಮುಖ್ಯವಾಗಿ ಅರ್ಜುನ. ಸಭೆಯಲ್ಲಿ "ಜಗವನಿಂದ್ರಿಯಕರಣ ವಿಷಯಾದಿಗಳನೆಲ್ಲವ ನೆತ್ತಿ ಮುಖದಲಿ ತೆಗೆದು ಶ್ರುತಿಶಿರದಮಲ ತತ್ತ್ವವ ನರಸುವಂದದಲಿ, ಬಗೆಯ ಬಯಕೆಯ ಸೊಗಸುಗಳ ದಾಯಿಗನಾದ" ಅರ್ಜುನನನ್ನು ಹುಡುಕಿ, ಕಾಣದಾದಾಗ ಹಿಂದಿರುಗಿದಳು.

ದ್ರುಪದ ಈಗ ನಿಜಕ್ಕೂ ಚಿಂತೆಗೊಳಗಾದ. "ಮಹಾದೇವ, ಜೋಯಿಸರ ಹೋರೆಗರ ಹೇಳಿಕೆ ಹೋಯಿತೇ ಹೊಳ್ಳಾಗಿ, ಪಾಂಡವರಾಯರನು ತೋರಿಸನೆ ಗದುಗಿನ ವೀರನಾರಯಣ" ಎನ್ನುತ್ತ ಬಲುಚಿಂತಿಸಿದ. ನಂತರ ದ್ರುಪದಾತ್ಮಜೆಯನ್ನು ರೂಪದಲ್ಲಂತೂ ಯಾರೂ ಮೆಚ್ಚಿಸಲಿಲ್ಲ. ಪರಾಕ್ರಮದಲ್ಲಾದರೂ ಜಯಿಸಲಿ ಎಂದುಕೊಳ್ಳುತ್ತ ನೆರೆದ ರಾಜರಿಗೆ ಬಲಪರೀಕ್ಷೆಯ ಪಂಥ ಒಡ್ಡಿದ. ಪರಾಕ್ರಮಿಗಳಿಗೆ ಮಾತ್ರ ಭಂಗಿಸಲಾಗುವಂತಹ ಧನುಸ್ಸನ್ನಿಟ್ಟು, ಸುತ್ತುತ್ತಿದ್ದ ಯಂತ್ರವೊಂದನ್ನು ಅಂತರಿಕ್ಷದಲ್ಲಿ ನಿರ್ಮಿಸಿ, "ಇದೆ ಮಹಾಧನು, ಬಾಣಪಂಚಕವಿದೆ, ನಭೋಗ್ರದ ಯಂತ್ರ ಹೊಳೆವುತ್ತಿದೆ ವಿಭಾಡಿಸಿ ಮೆರೆವನಾವನು ಬಾಹು ವಿಕ್ರಮವ, ಇದುವೆ ಕಬ್ಬಿನಬಿಲು, ಶರಾವಳಿಯಿದು ಕುಸುಮಮಯ ಯಂತ್ರವಬಲೆಯ ಹೃದಯ........ ರಮಣನಾತನೆ ಕುಸುಮ ಶರನೆಂದ''. ದ್ರುಪದನಿಗೆ ಈ ಸಂದರ್ಭಕ್ಕಾದರೂ ಬಂದು ಅರ್ಜುನ ಗೋಚರಿಸಲಿ ಎಂಬ ಬಯಕೆ, ತವಕ. ವೈದಿಕ ವಿಧಾನದಲ್ಲಿ ಧನುಸ್ಸು ಬಾಣಗಳನ್ನು ಸುಗಂಧಾಕ್ಷತೆಗಳಿಂದ ದ್ರುಪದ ಪೂಜೆ ಮಾಡಿಸಿದ ನಂತರ, ಭೋರ್ಗರೆವ ವಾದ್ಯರವಗಳ ನಡುವೆ, ನಾನಾದಿಕ್ಕುಗಳಿಂದ ಆಗಮಿಸಿದ್ದ ಭೂಸುರರು, ಒಬ್ಬೊಬ್ಬರಾಗಿ ಪಂಥವನ್ನು ಗೆಲ್ಲುವ ಸಾಹಸಕ್ಕಿಳಿದರು.

ಮೂಲ ಮಹಾಭಾರತದಲ್ಲಿಯೂ ಲಕ್ಷ್ಯಭೇದನದ ಸಂದರ್ಭ ಚೆನ್ನಾಗಿಯೇ ಚಿತ್ರಿತವಾಗಿದೆ. ಆದರೆ ಕುಮಾರವ್ಯಾಸ ಈ ಸಂದರ್ಭವನ್ನು ಮೂಲಕ್ಕಿಂತ ಸ್ವಾರಸ್ಯಮಯವಾಗಿ, ನಾಟಕೀಯವಾಗಿ, ಸಾರವತ್ತಾಗಿ, ಸುಂದರವಾಗಿ, ಹಾಸ್ಯಮಯವಾಗಿ ಚಿತ್ರಿಸಿದ್ದಾನೆ.

ಬಲದಿಂದಾದರೂ ದ್ರೌಪದಿಯನ್ನು ಗೆಲ್ಲಬೇಕೆಂಬ ಛಲದಿಂದ ಕೂಡಿದ್ದ ರಾಜರುಗಳೇನೋ, ತಾವೇ ಪರಾಕ್ರಮಿಗಳು, ದ್ರೌಪದಿ ತಮಗೇ ಲಕ್ಷ್ಯವೆಂಬ ಭಾವದಲ್ಲಿ ಬೀಗುತ್ತ, ಪರಸ್ಪರ ಅಸೂಯೆಯಿಂದ, ಬಲವನ್ನು ಬಾಯಲ್ಲಿ ಕೊಚ್ಚಿಕೊಳ್ಳುತ್ತ ಧನುವಿನ ಬಳಿಗೆ ಬಂದರು. ಆದರೆ ಅವರ ಸ್ಥಿತಿ "ಹರಗಿರಿಗೆ ಹುಲುರಕ್ಕಸರು ಮತ್ಸರಿಸು" ವಂತಾಯಿತು ಅಷ್ಟೆ. ಧನುವನ್ನು ಮೇಲೆತ್ತುವುದಿರಲಿ, ನೆಲದಿಂದ ಮೇಲೇಳದೆ, ಅದೇ "ವಿಭಾಡಿಸಿ ಕೆಡಹಿತು ಅವನಿಪರ". ಅಶಕ್ತರಾಜರು ಪರಾಭವದಿಂದ ಕೆಳಗೆ ಬಿದ್ದಾಗ ಅವರಿಗಾದ ದುರವಸ್ಥೆ ಇದು: "ಹಾರಹರಿದುದು, ಕರ್ಣಪೂರದ ಚಾರು ಮಣಿಗಳು ಸಡಲಿದುವು, ಪದವೀರನೇವುರನೆಗ್ಗಿದವು ಕುಗ್ಗಿದವು ನೆನಹುಗಳು ನಾರಿಯರ ಕೈಹೊಯ್ಲು ನಗೆಯನಿಹಾರ ಜಡಿದುದು ಮುಸುಕದಲೆಯ ಮಹೀರಮಣರೋಸರಿಸಿ ಸಿಂಹಾಸನವ ಸಾರಿದರು.'' ಹಲವಾರು ರಾಜರು ಸೋತದ್ದನ್ನು ಕಂಡು, ಸಧ್ಯ! ದ್ರೌಪದಿ ಅವರಿಗೆ ದಕ್ಕಲಿಲ್ಲವಲ್ಲ ಎಂದು ಮಾಗಧನನಿಗೆ ಬಹಳ ಸಂತೋಷವಾಯಿತು. "ಐಸಲೇ ಸೌಭಾಗ್ಯವೆಮಗೆ, ಶರಾಸನಾಕರುಷಣದೊಳತಿ ಡೊಳ್ಳಾಸದಲಿ ಡಾವರಿಸಿ ಗೆಲಿದಳು ದ್ರುಪದಸುತೆ ನೃಪರ, ಲೇಸು, ತಪ್ಪೇನಿದಕೆ ಎನುತ ಭದ್ರಾಸನವನಿಳಿದು ಉಲಿವ ತೊಡರಿನ ಘೋಷಣೆಯ, ಘೋಳಿಲುಗಳ ಮಗಧ ನೃಪಾಲನೈತಂದ". ಜಂಭ ಕೊಚ್ಚುತ್ತ, ಧನುವಿನ ಬಳಿ ಬಂದು ಅದನ್ನು ಕೂಲಂಕಷವಾಗಿ ನೋಡಿದ, ಮುಂಗೈಯ ಸರಪಣಿಯನ್ನು ಮೇಲೆ ತಿರುಹುತ್ತ, ಧನುವನ್ನು ಎತ್ತಿಯೂ ಎತ್ತಿದ. ಆದರೇನಾಯಿತು! "ಈತ ಕುಸಿದೆತ್ತಿದಡೆ ಧನು ಮಾರಾಂತುದು, ಇವನೇಕಿದಡೆ ಕಾರ್ಮುಕವೀತ—ನಾರೆಂದರಿಯದು, ಇವನೌಡೊತ್ತಿ ಮ್ಮೆಬಲಿದ ಘಾತಿಯಲಿ ಘಲ್ಲಿಸಿದಡೆ ಆ ಧನು ಸೋತುದು, ಎವೆಯಂತರಕೆ ತೊಲಗದು ಧಾತುಗುಂದಿದನು ಅಳ್ಳಿರಿದವು ಅಳ್ಳೆಗಳು ಮಾಗಧನ". ಮಾಗಧನಿಗೆ ಬಹಳ ಶ್ರಮವಾಗಿರಬೇಕು. ಆದರೆ ಪಟ್ಟನ್ನು ಬಿಡಲಿಲ್ಲ. ಹರಿಯುತ್ತಿದ್ದ ಬೆವರನ್ನೊರಸಿಕೊಂಡು, ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡು "ಮೊಳಕಾಲಿಕ್ಕಿ ದಂಡೆಯೊಳಮರಿ ದೇಹವ ಬಲಿದು ವಕ್ಷದೊಳೌಂಕಿ ಗಾಢದಲಿ"ಪ್ರಯತ್ನಿಸಿದ. ಆದರೂ ಧನು ಕ್ಷಣಮಾತ್ರದಲ್ಲಿ ಅವನ ಘನ ವಿಕ್ರಮವನ್ನು ಮುರಿದುಹಾಕಿ, ಗರ್ವಭಂಗಮಾಡಿತು. ಸೋತ ಮಾಗಧನನ್ನು ನೋಡಿ ನೆರೆದಿದ್ದ ಸ್ತ್ರೀ ಸಮೂಹ ಘೊಳ್ಳೆಂದು ನಕ್ಕಿತು. ಕುಗ್ಗಿಹೋದ ಮಾಗಧ "ತಾನೇಕೆ? ಧನುವೇಕೆ ಸುಡು" ಎನ್ನುತ್ತ ಅಲ್ಲಿಂದ ಮರೆಯಾದ.

ಮುಂದಿನದು ಶಿಶುಪಾಲನ ಸರದಿ. ಮಾಗಧ ಸೋತಾಗ ಹೆಂಗಸರು ನಕ್ಕಿದ್ದನ್ನು ಕಂಡು ಈತ ರೋಷಾವಿಷ್ಟನಾಗಿದ್ದ "ನಗುವ ಕನ್ನೆಯ ತುರುಬ ಕೊಯ್ಯುವೆನ್", "ಹೊಳ್ಳುಗಳೆವೆನು ದುರುಳ ಧನುವನು" ಎನ್ನುತ್ತ ಕಲಿಶಿಶುಪಾಲ ಧನುವಿನ ಬಳಿಬಂದ. "ಇವನಲೇ ರಾವಣನು ಮುನ್ನಿನ ಭವದೊಳಗೆ ತಪ್ಪಿಲ್ಲ ಎನುತ ಜನನಿವಹ ನಡುಗಿತು ಕೋಮಲಾಂಗಿಯ ಪುಣ್ಯವೆಂತು ಎನುತ". ಜನ ನಡುಗುವ ಪ್ರಮೇಯವೆ ಇರಲಿಲ್ಲ. ಏಕೆಂದರೆ ಶಿಶುಪಾಲ ಚೀರುತ್ತ, ನೆಗೆಯುತ್ತ, ಶಿವಶಿವಾ ಎಂದು ಅರಚುತ್ತ ಶತಪ್ರಯತ್ನ ಮಾಡಿದರೂ ಬಿಲ್ಲು ಜಗ್ಗಲೇ ಇಲ್ಲ. ಸಭೆಯಲ್ಲಿದ್ದ ಸಮಸ್ತ ಜನರ ಅವಹೇಳನಕ್ಕೆ, ಹಾಸ್ಯಕ್ಕೆ ಪಕ್ಕಾದ. ಸೋತ ಮಾಗಧನನ್ನು ಕೂಡಿಕೊಂಡು "ಈ ಧನು ಚಂಡಿ, ಇದು ನಮಗಲ್ಲ. ಈ ಭೂಮಿಪರು ಬಂದರು, ದ್ರುಪದನ ಗುಂಡುದೊತ್ತಿರು, ನಗೆಯ ನಾನಲಿ ಮಂಡೆಗಳಲಿ ಇವರು'' ಎನ್ನುತ್ತ ಸಮಾಧಾನ ಮಾಡಿಕೊಂಡ.

ರಾಜರು ಪಡೆಯುತ್ತಿರುವ ಪರಿಭವವನು ಕಂಡೂ, ಶಲ್ಯನಿಗೆ ತಾನೇಕೆ ಒಂದು ಕೈನೋಡಬಾರದೆಂದನಿಸಿತು. "ಪಾಂಚಾಲನ ಕುಮಾರಿಯ ವರಕಟಾಕ್ಷದ ಬೀಸುವಲೆಯಲಿ ಶರಮಹಾಧನುವೆಂಬ ಬಲುದಡಿವಲೆಯನಳವಡಿಸಿ ಧರಣಿಪಾಲ ಮೃಗಂಗಳನು ಸಲೆಬರಿಸಿ ಸದೆದನು ಹೊಲ್ಲಹೇನಂತಿರಲಿ" ನೋಡುತ್ತೇನೆ ಎನ್ನುತ್ತ ಧನುವಿನ ಬಳಿಗೆ ಬಂದ. ಬಂದವರೆಲ್ಲ ಜಯಿಸಿಯಾಯಿತು, ಈತನೊಬ್ಬ ಉಳಿದವ ಎನ್ನುತ್ತ ಕುತೂಹಲದಿಂದ ಅಲ್ಲಿದ್ದ ನಾರಿಯರು ನೋಡತೊಡಗಿದರು. ಶಲ್ಯನೇನೊ ಧೈರ್ಯವಾಗಿ ಧನುವಿನ ಬಳಿಗೆ ಬಂದುಬಿಟ್ಟ. ನಿಂತಲ್ಲೆ ನಿಂತು ನೆರೆದಿದ್ದ ಸ್ತ್ರೀವೃಂದವನ್ನು ನೋಡಿದ. ಮನಸ್ಸು ಪುಕ್ಕಲುತನದಿಂದ ಧಿಕ್ಕು ಧಿಗಿಲೆಂದಿತು. ಧೈರ್ಯಮಾಡಿ, "ಸಂದಣಿಯ ನಭಕೊತ್ತಿ ಫಣಿಯಲಿ ಮಂದರದ ಬಿಗಿವಂತೆ ಭುಜದಲಿ ಮುಂದುವರೆದು ಅವುಚಿದನು ದಂಡೆಯ ನಿಕ್ಕಿ ಕೋಪದಲಿ". ಮುಂದೇನಾಯಿತು? "ಕೊಳ್ಳದು ಈ ಧನು, ಈತನುಬ್ಬಿನೊಳಳ್ಳೆಗೊಬ್ಬಿನೊಳಾಕೆ ತೊಡರಿನ ಘಲ್ಲಣೆಯ ಘನಕುಲಿಯೆ ಪಂಟಿಸಿ ನಿಮಿಷಮಾತ್ರದಲಿ ಬಿಲ್ಲುಬಿಡದೆ ಅವನಿಯಲಿ ಬಿದ್ದನು ಡೊಳ್ಳುಮೇಲಾಗಿ''. ಸ್ತ್ರೀಯರು ಇವನು ಊಹಿಸಿದಂತೆಯೇ ಬಿದ್ದು ಬಿದ್ದು ನಗುತ್ತಿರಲು, "ಸುಡುಘೋರಧನುವನು" ಎನ್ನುತ್ತ ಅಲ್ಲಿಂದ ಕಾಲ್ಕಿತ್ತ. ಪ್ರತಿರಾಜರ ಪರಿಭವವನ್ನು ವರ್ಣಿಸುವ ಕುಮಾರವ್ಯಾಸನ ಚಿತ್ರಕಶಕ್ತಿ, ಸಹಜ ಚಿತ್ರಣ ಹಾಗೂ ತನ್ನ ಹಾಸ್ಯಮಯ ಗುಣದಿಂದಾಗಿ ಓದುಗರಲ್ಲಿ ನಗೆಯನ್ನು ಉಕ್ಕಿಸುತ್ತದೆ.

ಧನುರ್ಭಂಗ ಕಾರ್ಯದಲ್ಲಿ ಎಲ್ಲರೂ ಸೋತಾಗ, ಅಂತ್ಯದಲ್ಲಿ "ತಾನೀ ಚಾಪಧನುವನು ಭಂಗಿಸದೆ ಬಿಡೆನ್'' ಎಂದು ಸಂಕಲ್ಪಿಸಿ ಕರ್ಣ ತನ್ನ ಆಸನ ದಿಂದೆದ್ದು ಬಂದ. ಕರ್ಣನನ್ನು ಕಂಡು ಅಕ್ಷಿದ್ವ ಲಲನಾವ್ರಾತ ಅವನನ್ನು ಅರ್ಜುನನೆಂದೇ ಭಾವಿಸಿ, "ಈತನರ್ಜುನನಲ್ಲಲೇ, ರೂಪಾತಿಶಯವುಳ್ಳಾತ, ಯಂತ್ರವನೀತ ಗೆಲಿದರೆ ಪುಣ್ಯವೈಸಲೆ ತಂಗಿಗನುಸಾರಿ ಈತ ವರನಹುದು." ಎನ್ನುತ್ತ ಕೊಂಡಾಡತೊಡಗಿದರು. ದುರದೃಷ್ಟಕ್ಕೆ ಮಾಡುವ ಯತ್ನವನ್ನೆಲ್ಲ ಮಾಡಿದರೂ ಕರ್ಣ, "ಸರ್ಷಪ ಮಾತ್ರ ತಿರುವನು ತೊಡಿಸಲರಿಯದೆ ಹಿಂಗಿ ಮೌನದೊಳಿರ್ದ."

ಮೂಲಭಾರತದಲ್ಲಿ ಕರ್ಣ ಕ್ಷಣಮಾತ್ರದಲ್ಲಿ ಬಿಲ್ಲನ್ನು ಹೆದೆಯೇರಿಸಿ, ಪಂಚಬಾಣಗಳನ್ನು ಹೂಡುತ್ತಾನೆ. ಇನ್ನೇನು ಲಕ್ಷ್ಯವನ್ನು ಭೇದಿಸ ಬೇಕೆಂದಿರುವಷ್ಟರಲ್ಲಿ ದ್ರೌಪದಿ ಜೋರಾಗಿ "ನಾಹಂ ವರಯಾಮಿ ಸೂತಮ್'' ಎಂದು ಬಿಡುತ್ತಾಳೆ. ಆದರೆ ಕುಮಾರವ್ಯಾಸನ ಈ ಸಂದರ್ಭದ ದ್ರೌಪದಿ ಕರ್ಣನನ್ನು ಸೂತಪುತ್ರನೆಂದು ಹಳಿಯುವುದಿಲ್ಲ. ಧನುರ್ಭಂಗ ಕಾರ್ಯದಲ್ಲಿ ಕರ್ಣನೇ ಸೋಲುತ್ತಾನೆ. ಕುಮಾರವ್ಯಾಸನ ಮಾನವೀಯದೃಷ್ಟಿ ಇಲ್ಲಿ ಮುಖ್ಯ. ಕರ್ಣನನ್ನೂ ಇತರ ರಾಜರಂತೆಯೇ ಸಮನಾಗಿ ಕಂಡಿದ್ದಾನೆ.

ಕರ್ಣನೂ ಧನುರ್ಭಂಗ ಕಾರ್ಯದಲ್ಲಿ ಸೋತಾಗ ಬಲರಾಮ ನಗುತ್ತ 'ಕೃತಕ ಧನುವನು ಮುರಿದು ದ್ರುಪದನ ಸುತೆಯ ಮುಂದಲೆವಿಡಿದು ತಹೆನು' ಎಂದು ಆಸನ ಬಿಟ್ಟೇಳುತ್ತಾನೆ. ಆಗ ಕೃಷ್ಣ ಅವನನ್ನು ತಡೆದು, "ಕುಂತೀಸುತರು ದ್ರೌಪದಿಗೆ ರಮಣರು, ಈ ಸತಿಗೆ ಪಾಂಡವರಲ್ಲದೆ ಪತಿ ಪೆರರಿಲ್ಲ" ಎಂದು ಹೇಳಿ, ಬ್ರಾಹ್ಮಣರ ನಡುವಿದ್ದ ಪಾಂಡವರನ್ನು ಬಲರಾಮನಿಗೆ ತೋರಿಸುತ್ತಾನೆ. ಪಾಂಡವರು ಉಳಿದಿರುವುದನ್ನು ಕಂಡ ಬಲರಾಮ ಸಂತುಷ್ಟ ಚಿತ್ತನಾಗಿ, ಅವರ ಅಭ್ಯುದಯವಿದು ನಮ್ಮದು ಎನ್ನುತ್ತ ಸುಮ್ಮನಾಗುತ್ತಾನೆ.

ರೂಪ, ಬಲಗಳಲ್ಲೂ ದ್ರೌಪದಿಯನ್ನು ಮೆಚ್ಚಿಸುವುದರಲ್ಲಿ ಸಕಲರಾಜರೂ ಸೋತಾಗ ಧೃಷ್ಟ-ದ್ಯುಮ್ನ ದ್ರುಪದರು ಕಳವಳಕ್ಕೊಳಗಾದರು. ದ್ರೌಪದಿಗೆ ವರನಾಗಿ ಯಾರನ್ನು ಹುಡುಕುವುದು ? ಪಾಂಡವ ಕುಮಾರರಾದರೂ ಇದ್ದಿದ್ದರೆ ಎಂದು ತಳಮಳಿಸುತ್ತಿರುವಾಗ, ಧೃಷ್ಟದ್ಯುಮ್ನ ಮತ್ತೊಂದು ಯತ್ನಕ್ಕೆ ಕೈಹಾಕಿದ. "ಸಮುದ್ರಕೆ ಪತಿಸಮುದ್ರ''ವೆಂಬಂತೆ ನೆರೆದಿದ್ದ ಬ್ರಾಹ್ಮಣ ಮಹಾಜನರನ್ನು ಕುರಿತು "ಮುಂಗೈಯ ಬಲುಹುಳ್ಳವರು ಈ ಧನುವನ್ನು ನೆಗಹಲಿ, ಈ ಯಂತ್ರವನ್ನು ಜಯಿಸಲಿ ದ್ರೌಪದಿಯನ್ನು ಪಡೆಯಲಿ'' ಎಂದು ಘೋಷಿಸಿದ.

ವ್ಯಾಸಭಾರತದಲ್ಲಿ ಈ ಸಂದರ್ಭವೇ ಇಲ್ಲ. ಎಲ್ಲ ರಾಜರೂ ಚಾಪವಿಗಡಕಾರ್ಯದಲ್ಲಿ ಸೋತಾಗ, ಬ್ರಾಹ್ಮಣರ ನಡುವಿನ ಅರ್ಜುನ, ಆ ಕಾರ್ಯಕ್ಕೆ ತಾನೇ ಮುಂದೆ ಬರುತ್ತಾನೆ. ಆದರೆ ಘೋಷಣೆಯನಂತರ (ಧೃಷ್ಟದ್ಯುಮ್ನನ) ಕುಮಾರವ್ಯಾಸನ ಅರ್ಜುನ ಸಾಹಸಕ್ಕೆ ಮುಂದಾಗುತ್ತಾನೆ. ಅರ್ಜುನ ಈ ಕಾರ್ಯಕ್ಕೆ ಮುಂದಾದಾಗ ಬ್ರಾಹ್ಮಣರು ತೋರಿದ ಪ್ರತಿಕ್ರಿಯೆಯ ಸಂದರ್ಭ ಮೂಲದಲ್ಲಿ ಇದೆ. ಆದರೆ ಅಲ್ಲಿ ಬ್ರಾಹ್ಮಣರು ತಮ್ಮ ಪರಾಕ್ರಮವನ್ನು ಬಾಯಲಿ ಕೊಚ್ಚಿಕೊಳ್ಳುವಷ್ಟನ್ನೆ ಸಂಕ್ಷಿಪ್ತವಾಗಿ ಚಿತ್ರಿಸಲಾಗಿದೆ. ಆದರೆ ಕುಮಾರವ್ಯಾಸ ಮೂಲಕ್ಕಿಂತ ವಿವರವಾಗಿ ಭಾವಪೂರ್ಣವಾಗಿ, ಆಕರ್ಷಕವಾಗಿ ಚಿತ್ರಿಸುತ್ತಾನೆ. ಅರ್ಜುನನ ಸಾಹಸವನ್ನು ಕುರಿತ ಬ್ರಾಹ್ಮಣರ ಟೀಕೆ, ಪ್ರತಿಟೀಕೆ, ಆ ಮೂಲಕ ವ್ಯಕ್ತವಾಗುವ ಬ್ರಾಹ್ಮಣ ಮನೋಧರ್ಮ, ತಾವು ಸೋತದ್ದನ್ನೇ ಮರೆತು ಅರ್ಜುನನನ್ನು ಟೀಕಿಸುವ ರಾಜರು, ಸ್ತ್ರೀಯರು ಅರ್ಜುನನನ್ನು ಟೀಕಿಸುವ ಚಿತ್ರ–ಇತ್ಯಾದಿಗಳನ್ನು ಕವಿ ಈ ಸಂದರ್ಭದಲ್ಲಿ ಅತ್ಯಂತ ಸೊಬಗಿನಿಂದ ಚಿತ್ರಿಸಿದ್ದಾನೆ.

ಧೃಷ್ಟದ್ಯುಮ್ನನ ಘೋಷಣೆ ಬ್ರಾಹ್ಮಣರಿಗೆ ಹಾಸ್ಯಾಸ್ಪದವಾಗಿ ಕಾಣಿಸಿತು. ಏಕೆಂದರೆ ಅವರು ಸ್ವಯಂವರ ಸಭೆಗೆ ಬಂದ ಉದ್ದೇಶವೇ ದಕ್ಷಿಣೆ ಹಾಗೂ ಮೃಷ್ಟಾನ್ನಭೋಜನವನ್ನು ಪಡೆಯುವ ಸಲುವಾಗಿ. ಆದ್ದರಿಂದ "ನಮಗಿದೇಕೆ ಅರವಿಂದವದನೆಯ ತೊಡಕು, ತೆಗೆ, ನಾವಾರು ಧನುವಾರು ?" ಎಂದೆನಿಸಿದ್ದು ಸಹಜವೆ. ಪಂಡಿತರ ನಿಚಯದಲ್ಲಿ ತಮ್ಮ ವೈದಿಕ ವಿದ್ಯೆಯನ್ನು ವಾಕ್ಪಟುತ್ವದಿಂದ ಪ್ರದರ್ಶಿಸಿ, ವಿಸ್ಮಯ ತೋರುವ ಸಾಮರ್ಥ್ಯ ತಮಗುಂಟೇ ವಿನಃ ಧನುವನ್ನು ಭಂಗಿಸಲು ತಮಗೆ ಸಾಧ್ಯವೆ ? ಎಂದು ಅವರು ಅಲ್ಲಲ್ಲಿ ಪ್ರಶ್ನೆ ಕೇಳಿಕೊಂಡರು. ಬ್ರಾಹ್ಮಣರು ದ್ರುಪದನಿಗೆ ಸವಾಲೆಸೆವ ಬಗೆ ಓದುಗರಲ್ಲಿ ನಗೆ ಚಿಮ್ಮಿಸುತ್ತದೆ. ದ್ರುಪದ ಬೇಕಾದರೆ ನಮ್ಮನ್ನು ಕರೆಸಿ ಶಾಸ್ತ್ರ, ಪುರಾಣ, ಮಂತ್ರ ತಂತ್ರಗಳೇ ಮೊದಲಾದ ವಿಷಯಗಳಲ್ಲಿ ಪಂಥಕಟ್ಟಿ ಪರೀಕ್ಷಿಸಲಿ. ಅದು ಸಾಧ್ಯವಾಗದಿದ್ದರೆ "ಶೋಧಿಸಿದ ತನಿಬೆಲ್ಲ ವಿಕ್ಕಿದ ಹೂರಿಗೆಯ ಮೆದೆಯಲ್ಲಿ ಪರಡಿಯ ಶಾವಿಗೆಯ ಪರಿಪರಿಯ ಪಾಯಸದ ಪೂರ್ಣಿಗೆಯ, ತತ್ಸವಿಯ ಮಂಡಿಗೆಯಲ್ಲಿ, ನವಘೃತ ಸೂಪ-ದಂಶಕದಲ್ಲಿ ನೋಡಲಿನಮ್ಮನು." ಅದು ಬಿಟ್ಟು, ಬಲಪರೀಕ್ಷೆ ಮಾಡುವುದೆಂತಹ ನ್ಯಾಯ ? ಒಂದೆಡೆ ಬ್ರಾಹ್ಮಣರು ಈ ರೀತಿ ಹರಟೆ ಹೊಡೆಯುತ್ತಿದ್ದರೆ ಇತ್ತ "ರಸದ ಹೊರಲೇಪದಲಿ ಹುದುಗಿದ ಮಿಸುನಿಯಂತಿರೆ ಜೀವ ಭಾವಪ್ರಸರದೊಳಗವಲಂಬಿಸಿದ ಪರಮಾತ್ಮನಂದದಲಿ, ಎಸೆವ ವಿಪ್ರಾಕಾರದಲಿ ರಂಜಿಸುವ ಭೂಪತಿ" ಯುಧಿಷ್ಠಿರ, ತಮ್ಮನಾದ ಅರ್ಜುನನಿಗೆ ಸನ್ನೆಮಾಡಿದ. ಒಡನೆ ಅರ್ಜುನ ಮೇಲೆದ್ದು ಮನದಲ್ಲೆ ಧರ್ಮರಾಯ, ಕುಂತಿ, ಭೀಮರಿಗೆರಗಿ, ಸುತ್ತಲಿದ್ದ ವಿಪ್ರರನ್ನು ನೋಡಿ, ಮೆಲ್ಲನೆ ದರ್ಭೆಯಗೂಡ ಸಂವರಿಸುತ್ತ "ಧನುವಿದ್ದೆಡೆಗೆ ನಡೆದು ಬಂದ " ಅರ್ಜುನನ ಈ ಸಾಹಸವನ್ನು ಕಂಡು ವಿಪ್ರರಿಗೆ ಆಶ್ಚರ್ಯವೋ ಆಶ್ಚರ್ಯ. ಈತನಿಗೆ ಬುದ್ಧಿ ಕೆಟ್ಟಿದೆಯೇ ಎನ್ನುತ್ತ ಸರಸಮಯವಾಗಿ ಪರಿಹಾಸಮಾಡತೊಡಗಿದರು. "ಏನು ಸಿದ್ಧಿ ಉಪಾಧ್ಯರೆ ಎದ್ದಿರಿ ? ಇದೇನು ಧನುವಿಂಗಲ್ಲಲೇ ? ತಾನೇನು ಮನದಂಘವಣೆ ಬಯಸಿದಿರೇ ನಿತಂಬಿನಿಯ,ವೈನತೇಯನ ವಿಗಡಿಸಿದ ವಿಷಯವೇನು ಸದರವೊ, ಹಾವಡಿಗರಿಗದೇನು ನಿಮ್ಮುತ್ಸಾಹ," "ಮದುವೆ ಬೇಕೆ, ಶ್ರೋತ್ರಿಯ ಸ್ತೋಮದಲಿ ಕನ್ಯಾರ್ಥಿಗಳು ನಾವೆಂಬುದು, ನಿಜಾನ್ವಯ ವಿದ್ಯೆಯಲಿ ಕೊಡುವುದು ಪರೀಕ್ಷೆಗಳ ಮದುವೆಯಹುದು ಸೌಖ್ಯ ಪುಣ್ಯಪ್ರದ." ಅದು ಬಿಟ್ಟು ಈಕೆಯನ್ನು ವರಿಸುವುದು ಭಗೀರಥ ಪ್ರಯತ್ನವೆಂದು ಲೇವಡಿ ಮಾಡಿದರು. ಮತ್ತೆ ಕೆಲವು ಬ್ರಾಹ್ಮಣರು ಅರ್ಜುನನ ಸಾಹಸವನ್ನು ಪ್ರಶಂಸಿಸಿದರು. ಇನ್ನು ರಾಜರಾದರೋ ತಾವು ಸೋತದ್ದನ್ನೂ ಮರೆತು, "ಧನುನೆಗಹಲ್ಕೆ ಕೃಷ್ಣಾಜಿನವೊ, ಸಾಲಗ್ರಾಮದೇವರೊ, ವಿನುತ ತುಳಸಿಯೊ, ಕುಶವೊ, ದರ್ಭೆಯೊ, ಸಮಿಧೆಗಳ ಹೊರೆಯೊ, ನೆನೆದತಿಲವೊ, ಮೋಹ್ ಇದು ಜೋಪಾಸನದ ಕೊಳವಿಯೊ ಬಣಗು ವಿಪ್ರನನೆನಹ ನೋಡಿರೆ" ಎಂದು ಪಾರ್ಥನನ್ನು ಟೀಕಿಸಿದರು. ಒಂದೆಡೆ "ಎಲವೊ ಮಟ್ಟೆಯ ಮದನ, ದರ್ಭೆಯ ತಿಲದ ಮನ್ಮಥ, ವಿಮಲಧೋತ್ರದ ತಳಿರುಗಾಸೆಯ ಕಾಮ, ಕೃಷ್ಣಾಜಿನದ ಕಂದರ್ಪ, ನಳಿನ ಮುಖಿಯನುವರಿಸುಬಂ" ಎಂದು ಕಾಂತಾಜನಸಮೂಹ ಪರಿಹಾಸಮಾಡುತ್ತಿತ್ತು.

ಆದರೆ ಸ್ವಸಾಮರ್ಥ್ಯವನ್ನರಿತಿದ್ದ ಪಾರ್ಥನಿಗೆ, ಎಲ್ಲರ ಟೀಕೆಯು ಹಾಸ್ಯಾಸ್ಪದವೆನಿಸಿತು. ಯಾರ ಮಾತನ್ನೂ ಅವನು ಲಕ್ಷಿಸಲಿಲ್ಲ. ಮುಗುಳ್ನಗುತ್ತ ಧನುವಿನ ಬಳಿಗೆ ಬಂದ. ಅಪ್ಪಟವಾದ ಬ್ರಾಹ್ಮಣ ವೇಷದ ಅರ್ಜುನನ ಚಿತ್ರವಿದು: "ತೊಟ್ಟ ಹೊಸ ಯಜ್ಞೋಪವೀತದವ ಮಟ್ಟೆ ನೊಸಲಲಿ ಕುಶೆಯ ಕರಡಿಗೆ ಕಟ್ಟಿಯಿರುಕಿದ ಕಕ್ಷೆ ಬೆರಳಲಿ ಮುಂದ ದರ್ಭೆಗಳ ಎಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನರ ನಗೆಗಳ ನಟ್ಟವಿಗನೋಸರಿ ಸಭೆಯಲಿ ಮೆಲ್ಲನೈತಂದ." ಮನದಲ್ಲೆ ಭೀಷ್ಮ ದ್ರೋಣ, ಕೃಷ್ಣಾದಿಗಳಿಗೆ ನಮಿಸಿದ. ಬಿಲ್ಲನ್ನು

(37ನೇ ಪುಟ ನೋಡಿ

# ಚೇರದೇಶದ ವಿಷ್ಣುಕ್ಷೇತ್ರಗಳು

ಚೇರದೇಶವು ಇಂದಿನ ಕೇರಳ ಮತ್ತು ತಮಿಳು ನಾಡಿನ ನಾಗರಕೋಯಿಲ್ ಜಿಲ್ಲೆಯ ಕೆಲವು ಪ್ರದೇಶವನ್ನು ಒಳಗೊಂಡಿದೆ. ಇಲ್ಲಿನ ವಿಷ್ಣುಕ್ಷೇತ್ರಗಳನ್ನು ಮಲೆಯಾಳ ತಿರುಪತಿಗಳು ಅಥವಾ ಮಲೈನಾಡು ತಿರುಪತಿಗಳು ಎಂದು ಕರೆಯುತ್ತಾರೆ. ಹಿಂದೆ ವಿವರಿಸಿದ ವಿಷ್ಣುಕ್ಷೇತ್ರಗಳಿಗೂ ಚೇರದೇಶದ ವಿಷ್ಣುಕ್ಷೇತ್ರಗಳಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ಚೋಳ, ಪಾಂಡ್ಯ ಮತ್ತು ತೊಂಡಮಂಡಲದ ಶ್ರೀವೈಷ್ಣವ ಕ್ಷೇತ್ರಗಳು ಮುಖ್ಯವಾಗಿ ಮೈದಾನ ಪ್ರದೇಶಗಳಲ್ಲಿ, ನದೀ ದಡಗಳಲ್ಲಿದ್ದರೆ, ಇಲ್ಲಿನವುಗಳು ಬೆಟ್ಟಗುಡ್ಡ ಪ್ರದೇಶದಲ್ಲಿವೆ. ಆ ಕ್ಷೇತ್ರಗಳಿಗೆ ಹೋಗಿ ತಲುಪುವುದು ಸ್ವಲ್ಪ ಆಯಾಸಕರವೂ ಕಷ್ಟಕರವಾದುದೂ ಆಗಿದೆ. ಆದರೂ ಅಲ್ಲಿನ ಪ್ರಕೃತಿರಮಣೀಯತೆ ನಯನ ಮನೋಹರವಾದುದು, ಮನಸ್ಸಿಗೆ ಉಲ್ಲಾಸವನ್ನು ಕೊಡುವಂತಹುದು.

ಚೇರದೇಶದ ವಿಷ್ಣುಕ್ಷೇತ್ರಗಳನ್ನು ದಕ್ಷಿಣದಿಂದ ಇಲ್ಲವೆ ಉತ್ತರದಿಂದ ಪ್ರಾರಂಭಿಸಬಹುದು. ಊಟ ತಿಂಡಿಗಳಲ್ಲಿ, ಕೊಬ್ಬರಿ ಎಣ್ಣೆಯನು ಹೆಚ್ಚಾಗಿ ಉಪಯೋಗಿಸುವುದರಿಂದಲೂ, ಕುಸುಬಲು ಅಕ್ಕಿಯನ್ನು ಬಳಸುವುದರಿಂದಲೂ ಇತರೇ ಕಡೆಗಳಿಂದ ಹೋಗುವ ಯಾತ್ರಿಕರಿಗೆ ಸ್ವಲ್ಪ ತೊಂದರೆಯಾಗಬಹುದು. ಇದನ್ನು ದೃಷ್ಟಿಯಲ್ಲಿರಿಸಿಕೊಂಡು ಯಾತ್ರೆ ಕೈಗೊಂಡರೆ, ಸುಖಮಯವಾಗುವುದರಲ್ಲಿ ಸಂಶಯವಿಲ್ಲ.

ಈ ದೇಶದಲ್ಲಿನ ಅಧಿಕ ಜನರು ಹಿಂದೂಗಳಾದರೂ, ಅವರ ಆಚಾರ್ಯ ವ್ಯವಹಾರಗಳು ನಮಗಿಂತಲೂ ಭಿನ್ನವಾಗಿವೆ. ನಮಗೆ ಅಷ್ಟಾಗಿ ಹಿಡಿಸುವುದಿಲ್ಲ. ಇಲ್ಲಿನ ದೇವರುಗಳಿಗೆ ತೆಂಗಲೈ, ವಡಗಲೈ ಅಲ್ಲದ ಬೇರೆಯೇ ಆದ ತಿರುಮಣಿ (ನಾಮವನ್ನು) ಯನ್ನು ಇಡುವರು. ಹಣೆಯ ಮೇಲಿನದನ್ನು ಗೋಪಿಯಿಂದಲೂ, ಊರ್ಧ್ವ ಪುಂಡ್ರವನ್ನು ಚಂದನದಿಂದ ಕೂಡಿದ ಬೊಟ್ಟು ಸಹಿತವಾಗಿಯೂ ಇಡುವರು. ಹೆಚ್ಚಾಗಿ ಶೈವ, ವೈಷ್ಣವ ಭೇದವಿಲ್ಲ. ಬ್ರಾಹ್ಮಣರಿಗೆ ಇಲ್ಲೆಲ್ಲ ಹೆಚ್ಚಿನ ಮರ್ಯಾದೆ ಇದೆ. ಬ್ರಾಹ್ಮಣರಿಗೆ ವಿನಹ ಬೇರೆಯವರಿಗೆ ಸನ್ನಿಧಿಯಲ್ಲಿ ತುಳಸಿ ತೀರ್ಥಗಳನ್ನು ಕೊಡುವುದಿಲ್ಲ. ಇದು ಈಗೀಗ ಬದಲಾವಣೆಯಾಗ ತೊಡಗಿದ್ದರೂ, ಹಿಂದಿನಿಂದಲೂ ನಡೆದು ಬಂದಿರುವುದನ್ನು ಬಿಟ್ಟಿಲ್ಲ. ದೇವರ ಸಮೀಪದವರೆಗೂ ಜನರನ್ನು ಬಿಡುವರು, ಆದರೇನು ದೇವರ ಸನ್ನಿಧಿಯನ್ನು ಉನ್ನತವಾಗಿರುವಂತೆ ಕಟ್ಟಿರುವುದರಿಂದ ದೂರದಿಂದಲೂ ಮೂಲ ಮೂರ್ತಿಯವರನ್ನು ದರ್ಶಿಸಬಹುದು.

ಈ ಪ್ರದೇಶದ ದಿವ್ಯಕ್ಷೇತ್ರಗಳು ತಿರುವನಂತಪುರಂ, ನಾಗರಕೋಯಿಲ್, ತಿಂಗನೂರು, ಎರ್ನಾಕುಲಂಗಳ ಸುತ್ತ ಮುತ್ತ ಹರಡಿರುವುದರಿಂದ ಅವುಗಳನ್ನೇ ಕೇಂದ್ರಗಳನ್ನಾಗಿ ಆರಿಸಿಕೊಳ್ಳಬಹುದು

## ತಿರುವನಂತಪುರಂ

ಕೇರಳದ ರಾಜಧಾನಿಯಾಗಿರುವ ಈ ಕೇಂದ್ರವು ಹಿಂದೆ ಬಹಳ ಮುಖ್ಯಪಟ್ಟಣವಾಗಿದ್ದು, ದೇವು ಪಟ್ಟಣವಾಗಿದೆ. ಇದನ್ನು ಅನಂತಶಯನಂ ಎಂದೂ ಕರೆಯುವರು. ಈ ನಗರವು ಸಮುದ್ರಕ್ಕೆ ಎದುರಾಗಿರುವ ಪಶ್ಚಿಮ ಘಟ್ಟಗಳಿಗೆ ಸೇರಿದ ದಿಣ್ಣೆಯ ಮೇಲಿದ್ದು, ಅಲ್ಲಿನ ಕೋಟೆಯ ಮಧ್ಯದಲ್ಲಿ ಅನಂತಪದ್ಮನಾಭಸ್ವಾಮಿಯ ಸನ್ನಿಧಿ ಇದೆ. ಈ ಸ್ವಾಮಿಗೆ ಸಹಚರಿಯಾಗಿ ಶ್ರೀಹರಿ ಲಕ್ಷ್ಮಿನಾಚ್ಚಿಯರ್ ಇದ್ದಾರೆ. ಇಲ್ಲಿನದು ಹೇಮಕೂಟ ವಿಮಾನ, ಮತ್ಸ್ಯ ತೀರ್ಥ, ಪೂರ್ವ ತಿರುಮುಖ ಮಂಡಲ, ಭುಜಂಗಶಯನರು, ರುದ್ರ, ಇಂದ್ರ, ಚಂದ್ರರಿಗೆ ಪ್ರತ್ಯಕ್ಷರಾಗಿದ್ದಾರೆ. ನಮ್ಮಾಳ್ವಾರ್, ಪೆರಿಯಾಳ್ವಾರ್ ರವರುಗಳು ಮಂಗಳಾಶಾಸನ ಮಾಡಿದ್ದಾರೆ. ನಂಬೂದ್ರಿಗಳು ಇಲ್ಲಿನ ಅರ್ಚಕರು..........ಅನಂತ ಪದ್ಮನಾಭನ ಗರ್ಭಗೃಹಕ್ಕೆ ಮೂರು ಬಾಗಿಲುಗಳಿದ್ದು ಸ್ವಾಮಿಯ ಶಿರೋದರ್ಶನ, ನಾಭಿದರ್ಶನ ಹಾಗೂ ಪಾದದರ್ಶನವನ್ನು ಬಿಡಿಬಿಡಿಯಾಗಿ ಮಾಡಬಹುದಾಗಿದೆ. ಇಲ್ಲಿನ ದಕ್ಷಿಣದಲ್ಲಿ ಯೋಗಾ ನರಸಿಂಹರ ಸನ್ನಿಧಿ ಹಿಂಭಾಗದಲ್ಲಿ ಕೃಷ್ಣನ ಸನ್ನಿಧಿಗಳಿವೆ. ಮಹಾದ್ವಾರದಿಂದ ಒಳಗಡೆ ಎಡಭಾಗದಲ್ಲಿ ಅದ್ಭುತವಾದ ಏಕಶಿಲೆಯ ಸಭಾಮಂಟಪವಿದೆ ಶಿಲ್ಪಕಲೆಗೆ ಹೆಸರಾದ ಈ ಸಭಾಮಂಟಪವು ವಿವಿಧ ನಾದ ನೀಡುವ ಕಂಬಗಳನ್ನು ಹೊಂದಿದೆ. ಈ ದೇವರ ದರ್ಶನ ಮಾಡುವವರು ಕಟಿವೇಷ್ಟಿತರಾಗಿರ ಬೇಕು. ಈ ನಗರದಲ್ಲಿ ನಡೆಯುವ ನವರಾತ್ರಿ ಉತ್ಸವವು ಚಿರಸ್ಮರಣೀಯವಾದುದು ಇಲ್ಲಿನ ಲಕ್ಷದೀಪೋತ್ಸವವೂ ಅಷ್ಟೇ ಪ್ರಸಿದ್ಧ.

---

'ರಘುಸುತ'

---

## ನಾಗರ ಕೋಯಿಲ್ ಸುತ್ತ ಮುತ್ತ

ತಿರುವನಂತಪುರ (ತ್ರಿವೇಂಡ್ರಂ) ಕನ್ಯಾಕುಮಾರಿಗಳ ನಡುವೆ ನಾಗರ ಕೋಯಿಲ್ ಇದೆ. ಇದನ್ನು ಕೇಂದ್ರವಾಗಿಟ್ಟು ಕೊಂಡು ಸುತ್ತ ಮುತ್ತಲ ದಿವ್ಯದೇಶಗಳ ದರ್ಶನ ಪಡೆಯಬಹುದು.

ನಾಗರ ಕೋಯಿಲ್ 1½ ಮೈಲಿ ಈಶಾನ್ಯದಲ್ಲಿ ತಿರುವಣ್ ಪರಿಶಾರಮ್ ಎಂಬ ದಿವ್ಯಕ್ಷೇತ್ರವಿದೆ. ಇದನ್ನು ತಿರುವಣ್ಣ ಪರಿಪಾರಮ್ ಎಂದೂ, ತಿರುಪ್ಪರಿಸ್ಸಾರಂ ಎಂದೂ ಕರೆಯುತ್ತಾರೆ. ಇಲ್ಲಿನ ದಕ್ಷಿಣ ಸಮುದ್ರಸ್ಥಾನ ಮುಖ್ಯವಾದುದು ಹಾಗೂ ಪವಿತ್ರವಾದುದು ಎಂಬ ನಂಬಿಕೆ. ನಮ್ಮಾಳ್ವಾರರ ತಾಯಿಯಾದ ಉಡ್ಯೆಯನಂಗೈಯಾರರ ಜನ್ಮಸ್ಥಳವಿದು. ಆಳ್ವಾರರ ತಂದೆಯವರಾದ ತಿರುವಾಳ್ ಮಾರ್ಬನ್ ರವರ ತಿರುಮಾಳಿಗೆಯು ಆಗ ಭಜನ ಮಂದಿರವಾಗಿದೆ. ಇಲ್ಲಿಯ ಅರ್ಚಕರು ಉಡುಪಿಯ ಬ್ರಾಹ್ಮಣರು–ನಂಬೂದ್ರಿಗಳು. ಇಲ್ಲಿರುವ ಕೊಳದ ದಡದಲ್ಲಿರುವ ಅರಳಿ ಮರವನ್ನು ಪವಿತ್ರವೆಂದು ಭಕ್ತರು ಪರಿಗಣಿಸುತ್ತಾರೆ. ತಿರುಕ್ಕುರಳಪ್ಪನ್, ತಿರುವಾಳ್ ಮಾರ್ಬನ್, ಕಮಲವಲ್ಲಿ ನಾಂಚಾರ್, ಇಂದ್ರ ಕಲ್ಯಾಣವಿಮಾನ, ಲಕ್ಷ್ಮೀ ತೀರ್ಥ, ಪೂರ್ವ ತಿರುಮುಖ ಮಂಡಲ, ಭುಜಂಗಶಯನ, ವಿಂಧ್ಯೆ, ಕಾಳಿ, ಸಂಗಲ್‌ರವರುಗಳಿಗೆ ಪ್ರತ್ಯಕ್ಷ–ಇವು ಇಲ್ಲಿನ ಪ್ರಭಾವಗಳು.

ನಾಗರ ಕೋಯಿಲ್–ತ್ರಿವೇಂಡ್ರಂ ಹೆದ್ದಾರಿಯಲ್ಲಿ ವಾಯುವ್ಯದಲ್ಲಿ 16 ಮೈಲಿದೂರದಲ್ಲಿ ತೊಟ್ಟ ಪಟ್ಟನಿ (ತೊಡುವಟ್ಟಿ) ಎಂಬ ಊರಿನಲ್ಲಿಳಿದು, ಬೇರೆ ಬಸ್‌ನಲ್ಲಿ 3 ಮೈಲಿ ಉತ್ತರದ ಕಡೆ ಪ್ರಯಾಣ ಮಾಡಿದರೆ ತಿರುವಟ್ಟಾರು (ತಿರುವಾಟ್ಟಾರು) ಎಂಬ ದಿವ್ಯದೇಶ ಸಿಗುತ್ತದೆ. ಇತ್ತೀಚೆಗೆ ತೊಡುವಟ್ಟೆಯಿಂದ ಬಸ್ ಸಂಚಾರ ವ್ಯವಸ್ಥೆ ಸಾಕಷ್ಟು ಏರ್ಪಾಟು ಮಾಡಿದ್ದರೂ ತೃಪ್ತಿಕರವಾಗಿಲ್ಲ. ತಿರುವನಂತಪುರ – ಮಾರ್ತಾಂಡಗಳ ಕಡೆಯಿಂದಲೂ ಇಲ್ಲಿಗೆ ಬರಬಹುದು. ಈ ಕ್ಷೇತ್ರದ ಎರಡೂ ಪಕ್ಕಗಳಲ್ಲಿ ಪುಟ್ಟನದಿಗಳು ಪ್ರವಹಿಸುವುದರಿಂದ, ಇದನ್ನು ತಿರುವಟ್ಟಾರು ಎಂದು ಕರೆ

ಯುತ್ತಾರೆ. ಇಲ್ಲಿಸ ಗ್ರಾಮವು ಚಿಕ್ಕದಾದರೂ ಸಕಲ ಸೌಕರ್ಯಗಳೂ ಇದ್ದು, ಅಂಗಡಿ ಹೋಟೆಲುಗಳು ಬೇಕಾದಷ್ಟಿವೆ. ರಾತ್ರಿಗೆ ಬೇಕಾದರೂ ಉಳಿದುಕೊಳ್ಳಬಹುದು. ಇದು ಪರಶುರಾಮಕ್ಷೇತ್ರವೆಂದೂ ಪ್ರಸಿದ್ಧಿ ಪಡೆದಿದೆ. ಇಲ್ಲಿನ ಏಕಶಿಲಾ ಮಂಟಪದಲ್ಲಿ ದೇವರನ್ನು ಸೇವಿಸಲು ಅದರ ಗೋಡೆಗಳನ್ನು ಮುಟ್ಟಲು ಬ್ರಾಹ್ಮಣೇತರರಿಗೆ ಅವಕಾಶ ಕೊಟ್ಟಿಲ್ಲ. ಇಲ್ಲಿ ಆದಿಕೇಶವಪ್ಪೆರುಮಾಳ್ ಇದ್ದು, ಮರಕತವಲ್ಲಿ ನಾಚ್ಚಿಯಾರ್, ಅಷ್ಟಾಂಗ ವಿಮಾನ, ಕಡಲ್ ವಾಯು ತೀರ್ಥ, ರಾಮತೀರ್ಥಗಳಿವೆ, ಭುಜಂಗಶಯನ ಇಲ್ಲಿ ಪರಶುರಾಮ, ಚಂದ್ರರಿಗೆ ಪ್ರತ್ಯಕ್ಷನಾಗಿದ್ದಾನೆ. ಇಲ್ಲಿಯ ಅಷ್ಟಾಂಗ ವಿಮಾನವು ಅನಂತಶಯನದ ವಿಮಾನದಂತಿದೆ. ಅಲ್ಲಿನಂತೆಯೇ ಇಲ್ಲಿಯೂ ಗರ್ಭಗೃಹಕ್ಕೆ ಮೂರು ಬಾಗಿಲುಗಳಿವೆ. ನಮ್ಮಾಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

## ಶೆಂಗಣೂರ್ ಸುತ್ತಮುತ್ತ

ಕೈಲಾಸ್‌ಗೆ ಈಶಾನ್ಯದಲ್ಲಿ ಕೊಟ್ಟಾರಕ್ಕರೈ ಎಂಬ ರೈಲ್ವೆನಿಲ್ದಾಣವಿದೆ. ಸಾಕಷ್ಟು ದೊಡ್ಡ ಊರೂ ಹೌದು. ಇಲ್ಲಿಂದ 30 ಮೈಲಿಗಳ ದೂರದಲ್ಲಿ ಶೆಂಗಣೂರ್ ದಿವ್ಯಕ್ಷೇತ್ರವಿದೆ. ಈ ಕ್ಷೇತ್ರದ ಪೂರ್ವಕ್ಕೆ 3 ಮೈಲಿ ದೂರದಲ್ಲಿ ತಿರುವಾರನ್‌ವಿಳೈ, ನೈಋತ್ಯದಲ್ಲಿ 4 ಮೈಲಿ ದೂರದಲ್ಲಿ ತಿರುಪ್ಪುಲಿಯೂರು, ವಾಯುವ್ಯದಲ್ಲಿ 5 ಮೈಲಿ ದೂರದಲ್ಲಿ ತಿರುವಣ್ ವಣ್ಡೂರ್ ವಾಯುವ್ಯದಲ್ಲಿಯೇ 10 ಮೈಲಿ ದೂರದಲ್ಲಿ ತಿರುವಲ್ಲಿವಾಯ್, 14 ಮೈಲಿ ದೂರದಲ್ಲಿ ತಿರುಕ್ಕುಡಿತ್ತಾನಂ ಎನ್ನುವ ದಿವ್ಯಕ್ಷೇತ್ರಗಳಿವೆ. ಆಶ್ಚರ್ಯವೆಂದರೆ ಇಷ್ಟೂ ಕ್ಷೇತ್ರಗಳನ್ನು ಪಂಚಪಾಂಡವರು, ಕೃಷ್ಣನೂ ಸ್ಥಾಪಿಸಿದರೆಂಬ ಪ್ರತೀತಿ ಇದೆ. ಟ್ಯಾಕ್ಸಿ ಮಾಡಿಕೊಂಡು ಇವುಗಳನ್ನೆಲ್ಲ ಒಮ್ಮೆಲೇ ದರ್ಶಿಸಬಹುದು.

ಕೊಟ್ಟಾರಕ್ಕರೈ (ಕೊಟ್ಟಾರಕರಂ) ನಿಂದ 30 ಮೈಲಿ ದೂರದಲ್ಲಿ ಶೆಂಗಣೂರ್ ದಿವ್ಯಕ್ಷೇತ್ರವಿದೆ. ದೇವಸ್ಥಾನವು ಬಸ್ ನಿಲ್ದಾಣದಿಂದ ಒಂದು ಮೈಲಿ ದೂರದಲ್ಲಿದೆ. ಇದನ್ನು ತಿರುಶೆಂಕುಂಡ್ರೂರ್, ತಿರುಚಂಗನ್ನೂರ್, ತಿರುಚಿತ್ರವಾರು ಎಂಬ ಹೆಸರುಗಳಿಂದಲೂ ಕರೆಯುತ್ತಾರೆ ಇಲ್ಲಿ ಸತ್ರಗಳಿದ್ದು, ಎಲ್ಲ ರೀತಿಯ ಸೌಕರ್ಯಗಳೂ ಇವೆ. ಇಲ್ಲಿನ ಪ್ರಭಾವವೆಂದರೆ–ಇಮೈಯವರಪ್ಪನ್, ಶೆಂಗಮಲವಲ್ಲಿ ನಾಚ್ಚಾರ್, ಜಗಜ್ಜ್ಯೋತಿ ವಿಮಾನ, ತಿರುಚಿತ್ತಾರು, ಶಂಖ ತೀರ್ಥ ಪಶ್ಚಿಮಾಭಿಮುಖ, ನಿಂತ ನಿಲುವು, ಭಸ್ಮಾಸುರನ ನಿಮಿತ್ತ ಶಿವನಿಗೆ ಪ್ರತ್ಯಕ್ಷ. ನಮ್ಮಾಳ್ವಾರ್‌ರವರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಶೆಂಗಣೂರ್‌ನಿಂದ ಪಶ್ಚಿಮಕ್ಕೆ 3 ಮೈಲಿ ದೂರದಲ್ಲಿ ತಿರುಪ್ಪುಲಿಯೂರ್ ಎನ್ನುವ ದಿವ್ಯದೇಶವಿದೆ. ಇದನ್ನು ಕುಟ್ಟ (ಟ್ಟ) ನಾಟ್ಟು, ಕುಟ್ಟನಾಡು ಎಂದೂ ಕರೆಯುತ್ತಾರೆ. ಬಹು ಚಿಕ್ಕ ದೇವಾಲಯ. ಊರು ಕೂಡ ಚಿಕ್ಕದಾಗಿರುವುದರಿಂದ ಯಾವ ಸೌಕರ್ಯವೂ ಇಲ್ಲ. ಮೂಲವರ ತಿರುಮುಖವು ಬೆಳ್ಳಿಕವಚವನ್ನು ಧರಿಸಿರುವುದು ಇಲ್ಲಿನ ವಿಶೇಷ. ಪಂಚಪಾಂಡವರಲ್ಲಿ ಓರ್ವನಾದ ಭೀಮನು ಇದನ್ನು ಪ್ರತಿಷ್ಠಾಪಿಸಿದನೆಂದು ಹೇಳಲಾಗುತ್ತದೆ. ಮಾಯಪ್ಪಿರಾನ್ ಪೊರ್ಕಾರಿನಾಚ್ಚಿಯಾರ್, ಪುರುಷೋತ್ತಮ ವಿಮಾನ ಪೂಂಜುನೈ ತೀರ್ಥ (ಪ್ರಾಜ್ಞ ಸರಸ್) ಪೂರ್ವ ತಿರುಮುಖಮಂಡಲ, ನಿಂತ ನಿಲುವು, ಸಪ್ತಋಷಿಗಳಿಗೆ ಪ್ರತ್ಯಕ್ಷ–ಇವು ಈ ಕ್ಷೇತ್ರದ ಪ್ರಭಾವಗಳು. ನಮ್ಮಾಳ್ವಾರರು ಮತ್ತು ತಿರುಮಂಗೈ ಆಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಶೆಂಗಣೂರ್‌ಗೆ ಪಶ್ಚಿಮದಲ್ಲಿ ಐದು ಮೈಲಿ ದೂರದಲ್ಲಿ ತಿರುವಣ್ ವಂಡೂರ್ (ತಿರುವಮುಂಡೂರ್) ಎಂಬ ಕ್ಷೇತ್ರವಿದೆ. ಶೆಂಗಣೂರ್–ಕೊಟ್ಟಾಯಂ ಬಸ್ ಮಾರ್ಗದಲ್ಲಿ ಮಲೈಕ್ಕಾರ್‌ನಲ್ಲಿ ಇಳಿದು, ಅಲ್ಲಿಂದ ಪಶ್ಚಿಮಕ್ಕೆ ಒಂದೂವರೆ ಮೈಲಿ ದೂರ ಹೋದರೆ ಈ ಕ್ಷೇತ್ರ ಸಿಗುವುದು. ಇದೊಂದು ಚಿಕ್ಕ ಗ್ರಾಮವಾಗಿರುವುದರಿಂದ. ಯಾವ ಸೌಕರ್ಯವೂ ಇಲ್ಲ. ಈ ಸನ್ನಿಧಿಯನ್ನು ಪಾಂಡವರಲ್ಲಿ ಓರ್ವನಾದ ಸಹದೇವನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ಇಲ್ಲಿ ಧ್ವಜಸ್ತಂಭವಾಗಲಿ, ದ್ವಾರಪಾಲಕರಾಗಲಿ ಇಲ್ಲ. ಪಾಂಬಣೈಯಪ್ಪನ್, ಕಮಲವಲ್ಲಿ ನಾಚ್ಚಾರ್, ವೇದಾಲಯ ವಿಮಾನ, ಪಾಪನಾಶ ತೀರ್ಥ, ದಕ್ಷಿಣ ತಿರುಮುಖಮಂಡಲ, ನಿಂತ ನಿಲುವು, ಮಾರ್ಕಂಡೇಯ ನಾರದರಿಗೆ ಪ್ರತ್ಯಕ್ಷ–ಇವು ಇಲ್ಲಿನ ಪ್ರಭಾವಗಳು. ಇಲ್ಲಿ ತಾಯಾರ್ ಸನ್ನಿಧಿ ಇಲ್ಲ. ನಮ್ಮಾಳ್ವಾರ್‌ರವರು ಮಂಗಳಾಶಾಸನ ಮಾಡಿದ್ದಾರೆ.

ತಿರುವಣ್ ವಂಡೂರ್‌ಗೆ ಉತ್ತರಕ್ಕೆ ನಾಲ್ಕು ಮೈಲಿಗಳ ದೂರದಲ್ಲಿ ಶೆಂಗಣೂರ್‌ಗೆ ಉತ್ತರಕ್ಕೆ ಹತ್ತು ಮೈಲಿ ದೂರದಲ್ಲಿ ತಿರುವಲ್ಲವಾಯ್ (ತಿರುವಿಲ್ಲವಾರ್, ತಿರುವೆಲ್ಲಿ) ದಿವ್ಯಕ್ಷೇತ್ರವಿದೆ. ಇದೊಂದು ದೊಡ್ಡ ನಗರವಾದುದರಿಂದ ಭೋಜನಶಾಲೆ ಇತ್ಯಾದಿ ಎಲ್ಲ ಸೌಕರ್ಯಗಳೂ ಇವೆ. ಈ ಸನ್ನಿಧಿಯ ದೇವರನ್ನು ಶ್ರೀಕೃಷ್ಣನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ಇಲ್ಲಿನ ಚತುರಂಗ ಕೋಟೆ ವಿಮಾನದ ಪಕ್ಕದಲ್ಲಿ ಚಕ್ರತ್ತಾಳ್ವಾರರನ್ನು (ಸುದರ್ಶನ ಚಕ್ರವನ್ನು) ಪ್ರತಿಷ್ಠಾಪಿಸಲಾಗಿದೆ. ಈ ಸನ್ನಿಧಿಯಲ್ಲಿ ವಿಭೂತಿಯನ್ನು ವಿನಿಯೋಗ ಮಾಡುವುದು ಆಶ್ಚರ್ಯವೇ! ಇಲ್ಲಿ ಪುರುಷರಿಗೆ ಮಾತ್ರವೇ ಪ್ರವೇಶ, ಸ್ತ್ರೀಯರಿಗೆ ಇಲ್ಲ. ಹೊರಗಿನಿಂದ ದರ್ಶನ ಮಾಡಬಹುದು. ಕೋಲಪಿರಾನ್, ಶೆಲ್ವ ತಿರುಕ್ಕೊಳುನ್ದುನಾಚ್ಚಿಯಾರ್, ಚತುರಂಗ ಕೋಲ ವಿಮಾನ, ಘಂಟಾಕರ್ಣ ತೀರ್ಥ, ಪೂರ್ವ ತಿರುಮುಖ ಮಂಡಲ, ನಿಂತ ನಿಲುವು, ಘಂಟಾಕರ್ಣನಿಗೆ ಪ್ರತ್ಯಕ್ಷ. ನಮ್ಮಾಳ್ವಾರ್ ಮತ್ತು ತಿರುಮಂಗೈ ಆಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ. ಇದು ಪಂಪಾನದಿಯ ತೀರದಲ್ಲಿದೆ.

ತಿರುಚ್ಚೆಂಗ್‌ನೂರಿಗೆ (ಶೆಂಗಣೂರ್‌ಗೆ) ಪೂರ್ವದಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ 7 ಮೈಲಿ ದೂರದಲ್ಲಿ ತಿರುವಾರನ್ ವಿಳೈ (ಆರನ್ಮುಳೆ) ಎನ್ನುವ ದಿವ್ಯಕ್ಷೇತ್ರವಿದೆ. ಸಣ್ಣಗುಡ್ಡದ ಮೇಲೆ ದೇವಾಲಯವಿದೆ. ಇದೊಂದು ಚಿಕ್ಕನಗರವಾದುದರಿಂದ ತಕ್ಕಮಟ್ಟಿನ ಸೌಕರ್ಯವಿದೆ. ಸತ್ರವಿದೆ ಹೋಟೆಲ್ ಇಲ್ಲ. ಪಾಂಡವರಲ್ಲಿ ಓರ್ವನಾದ ಅರ್ಜುನನು ಈ ದೇವರನ್ನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ಇಲ್ಲಿನ ಮೂಲವರಿಗೆ ಅನುದಿನವೂ ತಿರುಮಂಜನ ಮಾಡಿಸಿ ಹಲವು ಪುಷ್ಪಗಳಿಂದ ಅಲಂಕರಿಸಿರುವ ವೈವಿಧ್ಯವನ್ನು ನೋಡುವುದೇ ಒಂದು ವಿಶೇಷನೋಟ, ಆನಂದ. ಈ ದಿವ್ಯದೇಶವೂ ಪಂಪಾನದಿ ತೀರದಲ್ಲಿದೆ. ತಿರುಕ್ಕುರಳಪ್ಪನ್, ಪದ್ಮಾಸನ ನಾಚ್ಚಿಯಾರು ವಾಮನ ವಿಮಾನ, ವೇದವ್ಯಾಸ ಸರಸ್ಸು, ಉತ್ತರ ತಿರುಮುಖಮಂಡಲ, ನಿಂತ ನಿಲುವು, ಬ್ರಹ್ಮನಿಗೆ ಪ್ರತ್ಯಕ್ಷ–ಇವು ಇಲ್ಲಿಯ ಪ್ರಭಾವ. ನಮ್ಮಾಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಶೆಂಗಣೂರ್‌ಗೆ ವಾಯುವ್ಯದಲ್ಲಿ 14 ಮೈಲಿ ದೂರದಲ್ಲಿ, ಕೊಟ್ಟಾಯಂನ ದಕ್ಷಿಣದಲ್ಲಿನ ಚೆಂಗನಾಶೇರ್ರಿಯಿಂದ ಮಣ್ಣಿನ ದಾರಿಯಲ್ಲಿ ಪೂರ್ವಕ್ಕೆ ಎರಡು ಮೈಲಿ ದೂರ ಹೋದರೆ ತಿರುಕುಡಿತ್ತಾನಂ ಎನ್ನುವ ದಿವ್ಯದೇಶ ಸಿಗುತ್ತದೆ. ಚೆಂಗನಾಶೇರ್ರಿಯಲ್ಲಿ ಇಳಿದುಕೊಂಡು ಇಲ್ಲಿಗೆ ಬರಬಹುದು. ಬಹು ಕಿರುಗ್ರಾಮ. ಯಾವ ಸೌಕರ್ಯವು ಇಲ್ಲ. ಈ ಸನ್ನಿಧಿಯ ದೇವರನ್ನ ಪಂಚಪಾಂಡವರಲ್ಲಿ ಓರ್ವನಾದ ಸಹದೇವನು ಪ್ರತಿಷ್ಠಿಸಿದನೆಂದು ಹೇಳುತ್ತಾರೆ. ಅದ್ಭುತ ನಾರಾಯಣ, ಕಲ್ಪಕವಲ್ಲಿ ತಾಯಾರ್, ಪುಣ್ಯಕೋಟಿ ವಿಮಾನ, ಭೂಮಿ ತೀರ್ಥ, ಪೂರ್ವತಿರುಮುಖಮಂಡಲ, ನಿಂತ ನಿಲುವು, ರುಕ್ಮಾಂಗದನಿಗೆ ಪ್ರತ್ಯಕ್ಷ–ಇವು ಇಲ್ಲಿನ ಪ್ರಭಾವಗಳು. ನಮ್ಮಾಳ್ವಾರ್‌ರವರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

(24 ನೇ ಪುಟ ನೋಡಿ)

# ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ

★



ಬಂದು ನಿಂತಿಹ ನೋಡಿ ಭೂತಳದಿ ವೆಂಕಟ
ಇಂದಿರೆಯ ಒಡಗೂಡಿ ಒಪ್ಪುವ ನಿರಂತರ ॥ ಪ ॥

ವಂದಿಸುತ ಮನದೊಳಗೆ ಇನನಡಿ ದ್ವಂದ್ವ ಭಜಿಸಲು
ಬಂದ ಭಯಹರ ಇಂದುಧರ ಸುರವೃಂದನುತ ಗೋ
ವಿಂದ ಘನದಯಾಸಿಂಧು ಶ್ರೀಹರಿ ॥ ಅ.ಪ. ॥

ದ್ವಾರದೆಡಬಲದಲ್ಲಿ ಜಯವಿಜಯರಿಬ್ಬರು
ಸೇರಿ ಸೇವಿಸರಲ್ಲಿ ಸನಕಾದಿನುತ ಶೃಂ
ಗಾರ ನಿಧಿ ಅಂಗದಲಿ ಮುಕ್ತಿನಲಿ ಶೋಭಿಪ
ಹಾರ ಪೊಂದಿಹುದಲ್ಲಿ ವಿಸ್ತಾರದಲ್ಲಿ

ವಾರವಾರಕೆ ಪೂಜೆಗೊಂಬುವ
ಹಾರಮುಕುಟಾಭರಣ ಕುಂಡಲ
ಧಾರಿ ಭುಜ ಕೇಯೂರಭೂಷಿತ
ಪಾರಮಿತ ಗುಣ ಮೋಹನಾಂಗ
ಚಾರುಪೀತಾಂಬರ ಕಟಿಯು
ಕರವೀರ ಕಲ್ಹಾರಾದಿ ಹೂವಿನ
ಹಾರ ಕೊರಳೊಳು ಎಸೆಯುತಿರೆ ವದನಾರ
ವಿಂದನು ನಗುತ ನಲಿಯುತ ॥ ೧ ॥

★

## ಹರಿದಾಸರು ಚಿತ್ರಿಸಿದಂತೆ



## ದೊಡ್ಡ ಶೇಷವಾಹನ

ಎಲ್ಲ ಭಕುತರಭೀಷ್ಟ ಕೊಡುವುದಕೆ
ತಾ ಕೈವಲ್ಯ ಸ್ಥಾನವ ಬಿಟ್ಟ
ಶೇಷಾದ್ರಿ ಮಂದಿರದಲ್ಲಿ ಲೋಲುಪ
ದಿಟ್ಟ ಸೌಭಾಗ್ಯನಿಧಿಗೆದುರಿಲ್ಲ
ಭುಜಬಲಪುಷ್ಟ ಕಸ್ತೂರಿಯಿಟ್ಟ
ಚೆಲ್ವ ಫಣೆಯಲಿ ಶೋಭಿಸುವ
ಸಿರಿವಲ್ಲಭನಗುಣ ಪೊಗಳದಿಹ ಜಗ ಖುಲ್ಲರೆದೆದಲ್ಲಣ

ಪರಾಕ್ರಮ ಮಲ್ಲ ಮರ್ಧನ ಮಾತುಳಾಂತಕ
ಫಲ್ಗುಣನ ಸಖ ಪ್ರಕಟನಾಗಿಹ
ದುರ್ಲಭನು ಅಘದೂರ
ಬಹು ಮಾಂಗಲ್ಯ ಹೃದಯವ ಮಾಡಿ
ಸೃಷ್ಟಿಗೆ ಉಲ್ಲಾಸ ಕೊಡುತಲಿ ಛಂದದಲಿ ॥ ೨ ॥
ಪದಕ ಕೌಸ್ತುಭಧಾರಿ ಸರಿಗೆಯು
ಸುಕಂಧರ ಸುದರ್ಶನಧಾರ
ಸುಂದರ ಮನೋಹರ ಪದಯುಗದಿ ನೂಪುರ ಇಟ್ಟಿಹನು
ಸನ್ಮುನಿ ಹೃದಯಸ್ಥಿತ ಗಂಭೀರ
ಬಹುದಾನಶೂರ ವಿಧಿಭವಾದ್ಯರ
ಪೊರೆವ ದಾತನು ತುದಿಮೊದಲು ಮಧ್ಯಗಳ ರಹಿತನು
ಉದುಭವಾದಿಗಳಿಗೆ ಸುಕರ್ತನು
ತ್ರಿದಶ ಪೂಜಿತ ತ್ರಿಭುವನೇಶ
ಸದುವಿಲಾಸದಿ ಸ್ವಾಮಿತೀರ್ಥದಿ
ಉದಿಸುತಿರೆ ಸಿರಿ ಮಹಿಳೆಸಹಿತದಿ
ಪದುಮನಾಭನು ಪುರಂದರ ವಿಠಲನು
ಮುದದಿ ಬ್ರಹ್ಮೋತ್ಸವದಿ ಮೆರೆಯುತ ॥ ೩ ॥

—ಪುರಂದರದಾಸರು.



## ಮುತ್ತಿನ ಪಲ್ಲಕ್ಕಿ ವಾಹನ

ಧ್ವಜದ ತಿಮ್ಮಪ್ಪ ಪಲ್ಲಕ್ಕಿಯೇರಿ ತನ್ನಯ
ನಿಜಗಿರಿ ಯಾತ್ರೆಗೈದಿದ ಹರುಷವ ಕೇಳಿ ॥ ಪ ॥

ಬಲದಲಭುಜಭವಾದಿಗಳೆಡದಲಿ
ಉಲಿವ ವೇದ – ಉಪನಿಷದುಗಳು
ಸಲುಗೆಯಲಿ ಸನಕಾದಿಗಳು ಸೇವಿಸೆ ಮುನ್ನ
ಹಲವು ಋಷಿ–ಮುನಿನಿಕರ ಹಿಂದೆ ಬರುತಿರಲು ॥ ೧ ॥

ಛತ್ರವ ಶಚಿ ಚಾಮರವ ಢಾಳಿಸೆ ಇಂದ್ರ
ಚಿತ್ತಜಾತನು ವ್ಯಜನವ ಬೀಸಲು
ಹೊತ್ತು ಮಾರುತಿ ಹಡಪ ಹೊಳೆನೆಲೆಗಳ ಕೊಡಲು
ಹಸ್ತದ ಕಾಳಂಜಿ ಹರಿಣಾಂಕನು ಬರೆ ॥ ೨ ॥

ವರುಣನು ಸ್ವಾದು ಜಲ ಹಿಡಿದು ಬರೆ
ತರಣಿ ತನಗೆ ಆಧಾರದಂತಿರಲು
ಸುರರು ಸುಮನಗಳಿಂದ ಸರ್ವರೂ ತಮತಮ್ಮ
ಪರಿಪರಿ ಆಯುಧಗಳಿಂದ ಬಳಸಿ ಬರೆ ॥ ೩ ॥

ಮಂದರ ಮಧ್ಯಮ ತಾರಕ ಪೋಷನ
ದಿಂದ ಗಂಧರ್ವರು ಗಾನ ಮಾಡೆ
ತೋಂಧಿಮಿ ಧಿಮಿಕೆಂದು ತಾಳ ಮೇಳದಿ ನಾ
ರಂದ ಪಾಡಲು ಆಡುತಾಡುತ ಬರುತಿರೆ ॥ ೪ ॥

ಲೋಕನಾಯಕ ಲೋಕೈಕ ರಕ್ಷಾಮಣಿ
ಸಾಕಾರರೂಪ ಸದ್ಗುಣ ಭರಿತ
ವೆಂಕಟೇಶ ವ್ಯಾಸಮುನಿ ವರದನಾದ ಕರು
ಣಾಕರ ಪುರಂದರ ವಿಠಲನು ಗಡ ॥ ೫ ॥

—ಪುರಂದರದಾಸರು.



## ಮೋಹಿನೀ ಅವತಾರ

ಇಂಥ ಹೆಣ್ಣನು ನಾನೆಲ್ಲಿ ಕಾಣೆನು
ಹೊಂತಕಾರಿ ಕಾಣಿರೊ ॥ ಪ ॥

ಸಂತತ ಸುರರಿಗೆ ಪಿಯೂಷವುಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ ॥ ಅ ಪ. ॥

ಮಂದಗಿರಿ ತಂದು ಸಿಂಧುವಿನೊಳಿಟ್ಟು
ಚೆಂದದಿ ಕಡೆದು ಅಮೃತವ ತೆಗೆದು
ಇಂದುಮುಖಿ ನೀ ಬಡಿಸೆಂದು ಕೊಟ್ಟರೆ
ದಂಧನಗಳ ಮಾಡಿ ದೈತ್ಯರ ವಂಚಿಸಿದ ॥ ೧ ॥

ವಿಶ್ವಾಸದಿಂಗಲಿ ಅಸುರಗೆ ವರವಿತ್ತು
ತ್ರಿಶೂಲಧರ ಓಡಿ ಬಳಲುತಿರೆ
ನಸುನಗುತಲಿ ಬಂದು ಭಸ್ಮಾಸುರಗೆ
ಭೋಗದಾಸೆಯ ತೋರಿ ಭಸ್ಮವ ಮಾಡಿದ ॥ ೨ ॥

ವಸುಧೆಯೊಳಗೆ ಹೆಣ್ಣು ಒಸಗೆಯಾಗದ ಮುನ್ನ
ಒಸಿರಲಿ ಬ್ರಹ್ಮನ ಪಡೆದವಳಿವಳು
ಕುಸುಮನಾಭ ಶ್ರೀ ಪುರಂದರ ವಿಠಲನ
ಪೆಸರ ಪೊತ್ತಿಹಳು ಈ ಪೊಸಕನ್ನಿಕೆ ॥ ೩ ॥

—ಪುರಂದರ ದಾಸರು.



## ರಥೋತ್ಸವ

ಭಕುತ ಜನ ಮುಂದೆ ನೀನವರ ಹಿಂದೆ
ಯುಕುತಿ ಕೈಗೊಳ್ಳದು ಗಯಾಗದಾಧರನೆ ॥ ಪ ॥

ತಟ್ಟೇಡು ಬಿಗಿದು ನದಿ ಸೂಸಿ ಪರಿವೃತ ಬರಲು
ಕಟ್ಟಲೆಯಿಂದ ಹರಿಗೋಲು ಹಾಕಿ
ನೆಟ್ಟನೆ ಆಚೀಚೆಗೆ ಪೋಗಿ ಬರುವಾಗ
ಹುಟ್ಟು ಮುಂದಲ್ಲದೆ ಹರಿಗೋಲು ಮುಂದೇನೊ ॥ ೧ ॥

ಕಾಳೆ ಹೆಗ್ಗಾಳೆ ದುಂದುಭಿ ಭೇರಿ ತಮಟೆ ನಿ
ಸ್ಸಾಳೆ ನಾನಾ ವಾದ್ಯಭೂಷಣಗಳು
ಸಾಲಾಗಿ ಬಳಿವಿಡಿದು ಸಂಭ್ರಮದಿ ಬರುವಾಗ
ಆಳು ಮುಂದಲ್ಲದೆ ಅರಸು ಮುಂದೇನೊ ॥ ೨

ಉತ್ಸವ ವಾಹನ ಬೀದಿಲಿ ಸುರಯುತ ಬರಲು
ಸತ್ಸಂಗತಿಗೆ ಹರಿದಾಸರಲ್ಲದೆ
ವತ್ಸ ಸಿರಿ ವಿಜಯ ವಿಠ್ಠಲ ವೆಂಕಟಾಚಲ
ವತ್ಸ ಮುಂದಲ್ಲದೆ ಧೇನು ಮುಂದೇನೊ ॥ ೩ ॥

—ವಿಜಯದಾಸರು.

# ಮಂಕುತಿಮ್ಮನ ಕಗ್ಗ

ಕನ್ನಡ ಸಾಹಿತ್ಯದಲ್ಲಿ ಡಿ. ವಿ ಗುಂಡಪ್ಪನವರ ಹೆಸರು ಚಿರಕಾಲ ನಿಲ್ಲುವುದು ಅವರ ಮಂಕುತಿಮ್ಮನ ಕಗ್ಗದಿಂದ. ಕಗ್ಗದ ಕವಿಯೆಂದೇ ಪ್ರಸಿದ್ಧರಾದ ಗುಂಡಪ್ಪನವರು ಕನ್ನಡನಾಡು ನುಡಿಗೆ ಅಪಾರವಾಗಿ ಸೇವೆ ಸಲ್ಲಿಸಿದ ಹಿರಿಯರಲ್ಲಿ ಒಬ್ಬರೆನ್ನಲು ಅಡ್ಡಿಯಿಲ್ಲ. ಅವರ ಶ್ರೀಮದ್ಭಗವದ್ಗೀತಾ ತಾತ್ಪರ್ಯ ಅಥವಾ ಜೀವನ ಧರ್ಮಯೋಗ–ಕೃತಿಗೆ ಕೇಂದ್ರಸಾಹಿತ್ಯ ಅಕಾಡಮಿ ಪ್ರಶಸ್ತಿ ದೊರೆತಿದೆ. ನಿವೇದನ, ವಸಂತ ಕುಸುಮಾಂಜಲಿ, ಕೇತಕೀವನ ಮೊದಲಾದ ಕವನ ಸಂಕಲನಗಳೂ, ವಿದ್ಯಾರಣ್ಯರ ಸಮಕಾಲೀನರು, ದಿವಾನ್ ರಂಗಾಚಾರ್ಲು, ಮೈಸೂರಿನ ದಿವಾನರು, ದಾದಾಭಾಯಿ ನವರೋಜಿ ಮೊದಲಾದ ಇತಿಹಾಸ ಚಿತ್ರಗಳೂ, ಶ್ರೀರಾಮ ಪರೀಕ್ಷಣಂ, ಶ್ರೀಕೃಷ್ಣ ಪರೀಕ್ಷಣಂ, ಶೃಂಗಾರಮಂಗಳಂ ಮೊದಲಾದ ತಾತ್ತ್ವಿಕ ಜಿಜ್ಞಾಸೆಯ ಖಂಡ ಕಾವ್ಯಗಳೂ ಗೀತ ಶಾಕುಂತಲಂ, ಅಂತಃಪುರ ಗೀತೆಗಳು ಮೊದಲಾದ ಸಂಗೀತ ಕೃತಿಗಳೂ, ಸಾಹಿತ್ಯ ಶಕ್ತಿ, ಜೀವನ ಸೌಂದರ್ಯ ಮತ್ತು ಸಾಹಿತ್ಯ ಮೊದಲಾದ ಸಾಹಿತ್ಯ ಮೀಮಾಂಸೆಯ ಕೃತಿಗಳೂ ಅವರ ಅರ್ಧ ಶತಕಕ್ಕೂ ಮಿಕ್ಕಿದ ಉನ್ನತ ಕೃತಿಗಳಲ್ಲಿ ಹಲವು. ಇವೆಲ್ಲಕ್ಕೂ ಕಿರೀಟವಿಟ್ಟಂತೆ ಮಂಕುತಿಮ್ಮನ ಕಗ್ಗ.

ಮಂಕುತಿಮ್ಮನ ಕಗ್ಗ ಮಂಕುತಿಮ್ಮ ಮಕುಟವನ್ನು ಹೊಂದಿದ 945 ಪದ್ಯಗಳ ಮಾಲೆ. ಪ್ರತಿಯೊಂದೂ ಬಿಡಿಬಿಡಿಯಾಗಿಯೇ ಇವೆ. ಪ್ರತಿಯೊಂದು ಪದ್ಯವೂ ಯಾವುದೋ ಒಂದು ಪ್ರಶ್ನೆಯನ್ನು ಒಂದು ತತ್ತ್ವವನ್ನು ಕುರಿತು ನಾಲ್ಕು ಮಾತುಗಳಲ್ಲಿ ಎಂದರೆ ನಾಲ್ಕು ಸಾಲುಗಳಲ್ಲಿ ವಿವರಿಸುತ್ತದೆ. ಸರ್ವಜ್ಞನ ತ್ರಿಪದಿಗಳಂತೆ, ವೇಮನನ ಆಟವೆಲದಿಯಂತೆ, ತಿರುವಳ್ಳುವರ ಏಳೆಗಳಂತೆ ತಾತ್ತ್ವಿಕ ಜಿಜ್ಞಾಸೆ ಇಲ್ಲಿ ಮೂಲ ಸೂತ್ರ. ಡಿ. ವಿ. ಗುಂಡಪ್ಪನವರು ಉಮರಖಯ್ಯಾಮನ ರುಬಯಿಯಾತ್‌ಗಳನ್ನು ಫಿಟ್ಸ್ ಜೆರಾಲ್ಡ್‌ನ ಆಂಗ್ಲ ಮೂಲದಿಂದ ಕನ್ನಡಕ್ಕೆ ಉಮರನ ಒಸಗೆಯಲ್ಲಿ ತಂದಿರುವ ಕವಿ. ರುಬಯಿಯಾತ್‌ನ ಲಕ್ಷಣಗಳೂ ಹಾಗೆಯೇ, ನಾಲ್ಕನೆಯ ಸಾಲಿನಲ್ಲಿ ಅರ್ಥದ ಘನಾಕಾರ – ಕೊನೆಯಲ್ಲಿ ಸಾರ್ವತ್ರಿಕ ಸತ್ಯವನ್ನು ಸಾರುವ ಪ್ರಯತ್ನ. ಮಂಕುತಿಮ್ಮನ ಕಗ್ಗದ ಮೊದಲನೆಯ ಪದ್ಯವನ್ನೇ ನೋಡಬಹುದು ಇದಕ್ಕೆ ಉದಾಹರಣೆಯಾಗಿ;

ಶ್ರೀ ವಿಷ್ಣು ವಿಶ್ವಾದಿಮೂಲ
ಮಾಯಾಲೋಲ
ದೇವ ಸರ್ವೇಶ
ಪರಬೊಮ್ಮನೆಂದು ಜನಂ
ಆವುದಂ ಕಾಣದೊಡಮಳ್ತಿಯಿಂ
ನಂಬಿಹುದೋ

ಆ ವಿಚಿತ್ರಕೆ ಮಣಿಯೊ ಮಂಕುತಿಮ್ಮ –ಇಲ್ಲಿ ಕಾಣದಿದ್ದರೂ ಪ್ರೇಮದಿಂದ ಲೋಕ ನಂಬುವ ಆ ದೈವಕ್ಕೆ ನಮಿಸುವ ಕ್ರಿಯೆ ಮುಖ್ಯವಾಗುತ್ತದೆ. ಹಾಗೆಯೇ 'ಕುರಿಯನಾಗಿಸಿ ನಿನ್ನ ಕಾಪಿಡುವ ಸಂಸಾರ ಪುರಿ ಮಾರಿಯಾದೀತೋ, ನಗುತ ಬಾಳುವ ವರವ ಮಿಗೆ ಬೇಡಿಕೊಳ್ಳೊ, ಜಗ ಸೂರ್ಯ ನೀಂ ಕಮಲ, ಸಲ್ಲಮುಬ್ಬಟೆ ನಮಗೆ, ಆಳದಿಂದಾತ್ಮಮತಿ, ತೆರೆಕೋಟಿ ಕಡಲೊಂದು, ಮುಂತಾಗಿ ಹೇಳುತ್ತ ಹೋಗಬಹುದು.

ಮಂಕುತಿಮ್ಮನ ಕಗ್ಗ ಬರಿಯ ತಾತ್ತ್ವಿಕ ಜಿಜ್ಞಾಸೆ ಮಾತ್ರವೇನಲ್ಲ. ಈ ಜಿಜ್ಞಾಸೆಯ ಒಳವಿವರಗಳಿಗೆ ಒಂದು ಕಥಾ ಚಿತ್ರದ ಚೌಕಟ್ಟು ಇದೆ. ಹಳ್ಳಿಯ ಶಾಲೆಯ ಮೇಷ್ಟ್ರು–ತಿಮ್ಮಗುರು, ತಮ್ಮ ತಂಗಿಯ ಮಗ ಸೋಮಿಯು ಅಭ್ಯುದಯ ಪಥದಲ್ಲಿ ನಡೆಯುವುದನ್ನು ಕಂಡು ಸಂತಸಪಡುತ್ತಾರೆ. ಅವರಿಗೆ ಜೀವನದಲ್ಲಿ ಬೇರಾವ ಆಸ್ಥೆಯೂ ಇಲ್ಲ. ಎಲ್ಲ ಸಾಲವನ್ನೂ ತೀರಿಸಿ ಹೊರಡಲು ಸಿದ್ಧವಾದ ಪರಿಪಕ್ವ ಜೀವ ಅವರದು. ಅವರು ತಮ್ಮಲ್ಲಿನ ಕಗ್ಗದ ಕರಪ್ರತಿಯನ್ನು ಸೋಮಿಗೆ ಬಿಟ್ಟು ತೀರ್ಥ ಯಾತ್ರೆ ಹೊರಡುವರು. ತಿರುಪತಿಯಿಂದ ಕಾಗದ ಬರೆದು ಮುಂದೆ ಕಾಶಿಗೆ ಹೋಗಬೇಕೆಂಬ ಅಪೇಕ್ಷೆಯನ್ನು ತಿಳಿಸುತ್ತಾರೆ. ನನ್ನ ನೆನಪಾದಲ್ಲಿ ಗುಡಿಯಲ್ಲಿ ಒಂದು ಹಣತೆ ಹಚ್ಚಿರೆಂದು ಬೇಡುತ್ತಾರೆ. ಅವರು ಬಿಟ್ಟುಹೋದ ಹಸ್ತಪ್ರತಿಯೇ ಮಂಕುತಿಮ್ಮನ ಕಗ್ಗ.

ಮಂಕುತಿಮ್ಮನ ಕಗ್ಗದಲ್ಲಿ ಏನಿದೆ? ಅದರ ಹೆಸರೇ ಹೇಳುವಂತೆ ಅದು ಕಗ್ಗ ಎಂದರೂ ಒಳಹೊಕ್ಕು ನೋಡಿದಂತೆ ಅದರ ವಿಶಾಲವಾದ ಪಾತ್ರದ ಅರಿವಾಗುತ್ತದೆ. ಅದರ ಉಪ ವಿಭಾಗಗಳ ತಲೆಬರಹಗಳನ್ನು ಗಮನಿಸಿದರೂ ಸಾಕು– ವಿಶ್ವಲೀಲೆ, ಜೀವ ತಾಂಡವ, ಋಣಾನುಬಂಧ, ಕ್ಷಮೆ, ಪ್ರಗತಿ ಕಥೆ, ಜಗದಶ್ವತ್ಥ, ಗುಣವಿಕಾಸ, ಹೃದಯ ಮಂಥನ, ಕರ್ಮಸೂತ್ರ, ಗುಪ್ತಗಾಮಿನಿ, ಧರ್ಮನಿರ್ಣಯ, ಆತ್ಮಋಣ, ಸಾಧನೋಪಾಯ, ನಿಷ್ಕಾಮ ಪೂಜೆ–ಮೊದಲಾಗಿ. ಇನ್ನಿದರ ಒಳಗು – ನೀರಿಗಿಳಿಯದೆ ಆಳವಾದರೂ ತಿಳಿಯುವುದೆಂತು? ಕಗ್ಗದ ಮಾತಿನಲ್ಲಿಯೇ ಹೇಳಬೇಕೆಂದರೆ 'ವಾಪಿಯಾಳವ ದಡದಿ ನಿಂತಾತನರಿವನೇ' ಅದಕ್ಕಾಗಿ ಅಲ್ಲಲ್ಲಿಯಾದರೂ ಅದರಲ್ಲಿ ಮುಳುಗಬೇಕು.

ಅರೆಗಣ್ಣು ನಮದೆಂದು
ಕೊರಕೊರಗಿ ಫಲವೇನು?
ಅರೆಬೆಳಕು ಧರೆಯೊಳೆಂದೊರಲಿ
ಸುಖವೇನು
ಇರುವ ಕಣ್ಣಿರುವ ಬೆಳಕಿನೊಳಾದನಿತ
ನೋಡಿ
ಪರಿಕಿಸಿದೊಡದು ಲಾಭ ಮಂಕುತಿಮ್ಮ

ಸೃಷ್ಟಿ ರಹಸ್ಯವನ್ನು ಜೀವನದ ಪರಮಾರ್ಥವನ್ನು ತಿಳಿಯುವ ಪ್ರಯತ್ನದಲ್ಲಿ ಮಾನವನಿಗಿರುವ ಸಾಧನ ಸಂಪತ್ತು ಉಪಾಯಗಳನ್ನು ಕುರಿತು ಯೋಚಿಸುತ್ತ ಹೊರಬಂದ ಮಾತು ಇದು. ಮಾನವನ

ಜ್ಞಾನದ ಮಿತಿಯನ್ನು ಚಿಂತಿಸಿ, ನಿರಾಶರಾಗ ಬೇಕಾದ್ದಿಲ್ಲ ಎಂಬ ಭರವಸೆ ಇಲ್ಲಿದೆ.

ಇದೇ ಸಾಲಿಗೆ ಸೇರುವ ಇನ್ನೊಂದು ಪದ್ಯ:

ಮರೆತಿಹನೆ ಬೊಮ್ಮ! ಮರೆತಿಲ್ಲ
ಮರೆತವೊಲಿಹನು
ಧರಿಸಿ ಜೀವಾಕೃತಿಯ ಜಗದಿ
ತನ್ನನೆ ತಾನ್
ಅರಸಿಕೊಳುವವೊಲಿಹುದು,
ದೊರೆತವೋಲ್ ತೋರಿಸುಖ
ದೊರೆವವರೆಗಾಯುಸವೊ ಮಂಕುತಿಮ್ಮ

ಹೀಗೆ ವಿಶ್ವ ಮೂಲ, ಬ್ರಹ್ಮ, ಜೀವ ರೊಳಗಿನ ಸಂಬಂಧಗಳನ್ನು ವಿಶ್ಲೇಷಿಸುತ್ತ; 'ನಿತ್ಯ ಸತ್ತ್ವವೆ ಭಿತ್ತಿ, ಜೀವಿತ ಕ್ಷಣಚಿತ್ರ, ತತ್ತ್ವವೀ ಸಂಬಂಧ'ವೆಂದು ನಿರ್ಣಯಿ ಸುತ್ತಾರೆ; ಜೊತೆಗೇ ಈ ಶೋಧನೆಯ ವಿವಿಧ ಹಂತಗಳನ್ನು ಗುರುತಿಸುತ್ತಾರೆ.

ಅ ಜ್ಞಾ ತ ವಾ ದು ದ ನ ಭಾ ವ ವೆ ನೆ
ನಾಸ್ತಿಕನು
ಅಜ್ಞೇಯವೆಂದದಕೆ
ಕೈ ಮುಗಿಯೆ ಭಕ್ತ
ಜಿಜ್ಞಾಸ್ಯವೆಂದು ಪರಿಕಿಸತೊಡಗೆ
ವಿಜ್ಞಾನಿ
ಸ್ವಜ್ಞಪ್ತಿಶೋಧಿ ಮುನಿ ಮಂಕುತಿಮ್ಮ ||

ವಿಧಿಯ ಸರ್ವಂಕಷತೆಯನ್ನು ಚಿತ್ರಿಸುತ್ತ ಒಂದು ಕಡೆ–

ಬನ್ನಿರಾಡುವ ಕಣ್ಣಮುಚ್ಚಾಲೆ
ಯಾಟವನು
ಎನ್ನನರಸಿರಿ ಬನ್ನಿ ಮಕ್ಕಳಿರ ಬೇಗ
ಬನ್ನಿರಾಟವ ಬೇಡವೆಂಬರನು
ನಾಂ ಬಿಡೆನು
ಎನ್ನುವಜ್ಜಿಯೋ ಬೊಮ್ಮ–
ಮಂಕುತಿಮ್ಮ

ಎನ್ನುತ್ತ ಬ್ರಹ್ಮನಲ್ಲಿನ ವಾತ್ಸಲ್ಯಗುಣ ವನ್ನು ಅಜ್ಜಿಯ ಚಿತ್ರದಿಂದ ಸ್ಪಷ್ಟ ಗೊಳಿಸಿದರೂ ವಿಧಿಯ ಒತ್ತಾಯವನ್ನು ಸಮರ್ಥವಾಗಿ ಬಿಂಬಿಸುವರು. ಇಲ್ಲಿ ಅವನ ಅಥವಾ ಅದರ ಭಾವ ಏನಾದರೂ ಆಗಿರ ಲೊಲ್ಲದೇಕೆ? ಜೀವನಿಗೆ ಆಗಬೇಕಾದ್ದು ವಿಧಿಗೆ ಪ್ರತಿಸ್ಪಂದಿಸುವಿಕೆ-ಎಂತಲೇ ಮುಂದೆ ಹೇಳುವರು–

ವಿಧಿಯ ಹೊರೆಗಳನು ತಪ್ಪಿಸಿಕೊಳುವ
ನೆಲ್ಲಿಹನು?
ಬೆದರಿಕೆಯುಪದರಿಂದ ನೀಗಿಪನು ಸಖನು
ಎದೆಯನುಕ್ಕಾಗಿಸಾನಿಸು ಬೆನ್ನ
ತುಟಿಯ ಬಿಗಿ
ವಿಧಿಯುಗಸ ನೀ ಕತ್ತೆ–ಮಂಕುತಿಮ್ಮ

ಇದೇ ಭಾವನೆಯನ್ನು ಮತ್ತೊಂದು ಕಡೆ ಇನ್ನೊಂದು ರೀತಿಯಲ್ಲಿ ಹೇಳಲಾಗಿದೆ–

ಬದುಕು ಜಟಕಾಬಂಡಿ ವಿಧಿಯದರ
ಸಾಹೇಬ
ಕುದುರೆ ನೀನ್ ಅವನು ಪೇಳ್ದಂತೆ
ಪಯಣಿಗರು
ಮದುವೆಗೂ ಮಸಣಕೋ ಹೋಗೆಂದ
ಕಡೆಗೋಡು
ಪದಕುಸಿಯೆ ನೆಲವಿಹುದು –
ಮಂಕುತಿಮ್ಮ

ಹೀಗೆ ವಿಧಿಸಾರವ್ಯವನ್ನು ವಿವರಿಸುತ್ತ ಹೊರಟಾಗ ಪುರುಷಪ್ರಯತ್ನದ ಪ್ರಶ್ನೆ ಬರುವುದು ಸಹಜ. ಅದನ್ನು ವಿವರಿಸುತ್ತ ಹೇಳುವರು–

ಪುರುಷ ಸ್ವತಂತ್ರನೊ? ದೈವವಿಧಿ
ಪರವಶನೋ?
ಎರಡುಮನಿತಿನಿತುಳ್ಳ
ತೋಳಿನಂತಿನೋ?
ತಿರುಗುವುದು ಮಡಿಸುವುದು ತೋಳ್
ಮೈಯ ಕಟ್ಟಿನಲಿ
ನರನಂತು ಮಿತಶಕ್ತ–ಮಂಕುತಿಮ್ಮ

ಜೀವ ದೇವ ಸಂಬಂಧಗಳು ನರಜನ್ಮದ ಮಿತ ಸ್ವಾತಂತ್ರ್ಯ (ಎಲ್ಲ ಸ್ವಾತಂತ್ರ್ಯವೂ ಕೆಲವು ಮಿತಿಗಳನ್ನು ಹೊಂದಿಯೇ ಇರ ಬೇಕು, ಇರುತ್ತದೆ ಕೂಡ.) ಗಳ ಹಿನ್ನೆಲೆ ಯಲ್ಲಿ ನರನ ಒಳಗನ್ನೂ ಶೋಧಿಸುತ್ತಾರೆ ಕವಿ.

ನಂಬದಿರ್ದನು ತಂದೆ ನಂಬಿದನು
ಪ್ರಹ್ಲಾದ
ನಂಬಿಯುಂ ನಂಬದಿರುವಿಬ್ಬಂದಿ ನೀನು
ಕಂಬದಿನೊ ಬಿಂಬದಿನೊ
ಮೋಕ್ಷವವರಿಂಗಾಯ್ತು
ಸಿಂಬಳದಿ ನೊಣ ನೀನು–ಮಂಕುತಿಮ್ಮ

ಇದು ನರನಲ್ಲಿನ ಅಸ್ಥಿರತೆಯಾದರೆ ಅವ ನಲ್ಲಿರಬೇಕಾದ ಗುಣವನ್ನು ಚಿತ್ರಿಸುತ್ತ ಹೇಳುವ ಪದ್ಯ ಗಮನಾರ್ಹ.

ಕಕ್ಷಿಗಾರನವೊಲೇ ಪೋರುತ್ತೆ
ನ್ಯಾಯಕ್ಕೆ
ಸಾಕ್ಷಿಯವೊಲಿರು ಕಡೆಗೆ
ತೀರ್ಪಾಗುವಂದು
ಭಿಕ್ಷುವೊಲು ಕಾಲಸವೆಯಿಸಿ
ಲೋಕ ಯಾತ್ರೆಯಲಿ
ಪಕ್ಷಿವೊಲು ಮನದೊಳಿರು –
ಮಂಕುತಿಮ್ಮ

ಪುರಾಣ, ರಾಮಾಯಣ, ಭಾರತಗಳ ಚಿತ್ರಗಳು, ಮಂಕುತಿಮ್ಮನ ಕಗ್ಗದಲ್ಲಿ ಯಥೇಚ್ಛ. ಉದಾಹರಣೆಗೊಂದೆರಡು ತುಣುಕುಗಳು–

ತನ್ನ ರುಚಿ ರಾಮರುಚಿ ತನ್ನ
ಸಂತುಷ್ಟಿ ಪರಿ
ಪೂರ್ಣವಪ್ಪುದು ರಾಮ
ಸಂತುಷ್ಟಿಯಿಂದೆ
ಎನ್ನುವ ಸಾಜದಾ ದೈವಾತ್ಮ ಭಾವದಲಿ
ಧನ್ಯಳಾದಳು ಶಬರಿ–ಮಂಕುತಿಮ್ಮ

ಘನತತ್ತ್ವವೊಂದಕ್ಕೆ ದಿನರಾತ್ರಿ
ಮನಸೋತು
ನೆನೆಯದಿನ್ನೊಂದನೆಲ್ಲವ ನೀಡುತದರಾ
ಅನುಸಂಧಿಯಲಿ ಜೀವಭಾರವನು
ಮರೆಯುವುದು
ಹನುಮಂತನುಪದೇಶ–ಮಂಕುತಿಮ್ಮ

ಇಷ್ಟೆಲ್ಲ ಆದಮೇಲೂ ಕವಿ ವಿನಯವನ್ನು ಬಿಡಬಾರದೆಂಬುದನ್ನು ಸೊಗಸಾಗಿ ತಿಳಿ ದಿದ್ದಾರೆ.

ಬೇಡಿದುದನೀವನೀಶ್ವರನೆಂಬ ನಚ್ಚಿಲ್ಲ
ಬೇಡಲೊಳಿತಾವುದೆಂಬುದರರಿವುಮಿಲ್ಲ
ಕೂಡಿ ಬಂದುದನೆ ನೀನ್
ಅವನಿಚ್ಛೆಯೆಂದುಕೊಳೆ
ನೀಡಿಗೆದೆಗಟ್ಟಿಯನು–ಮಂಕುತಿಮ್ಮ

ಹೀಗೆ ದೇವ ಜೀವ ರಹಸ್ಯವನ್ನೂ ನರತೆಯ ಅಂತರಂಗವನ್ನೂ ವಿವರಿಸುವ ಸಮಾಧಾನಗೊಳಿಸುವ ಮಂಕುತಿಮ್ಮನ ಕಗ್ಗ ಜ್ಞಾನದ ಹಿರಿಮೆಯ ಪ್ರಖ್ಯಾತಿಗಾಗಿ ಶಿಖರಾಗ್ರದಲ್ಲಿ ಒಮ್ಮೆ ಪರಿಗಣಿತವಾಗಿದ್ದಿತು ಎಂಬುದನ್ನು ವಿ. ಸೀ. ಯವರ ಪುಸ್ತಕಗಳಲ್ಲಿ ದಾಖಲಾಗಿರುವುದರಿಂದ ತಿಳಿಯಬಹುದು. ಡಿ. ವಿ. ಜಿ. ಯವರದೇ ಆದ ಇನ್ನೊಂದು ಕೃತಿ–ಮರುಳು ಮುನಿಯನ ಕಗ್ಗ, ಮಂಕುತಿಮ್ಮನ ಕಗ್ಗದ ಹೆಚ್ಚುವರಿಯೆಂದೇ – ತತ್ತ್ವಜಿಜ್ಞಾಸಾ ಧಾರೆಯೆಂದೇ–ಭಾಸವಾಗುವುದು. ಮರುಳು ಮುನಿಯ ಎಂಬ ಹೆಸರು ಬರಲು ಕಾರಣ ವಿಶೇಷವೇನಲ್ಲ ; ಮಂಕುತಿಮ್ಮನ ಕಗ್ಗದಲ್ಲಿಯೇ ಹೇಳಿರುವಂತೆ

ಮಂಕುತಿಮ್ಮನ ಹೆಸರು ಬಿಂಕಕ್ಕೆ
ಸಾಲದೆನೆ
ವೆಂಕನಿಗೆ ಶಂಕನಿಗೊ
ಶಂಕರಾರ್ಯನಿಗೊ
ಅಂಕಿತವ ಮಾಳ್ಕೆ ಜನರವರೋದಿದರೆ
ಸಾಕು
ಶಂಕೆ ನಿನಗೇಸಹುದೋ–ಮಂಕುತಿಮ್ಮ

ಎಲ್ಲ ಅಂಕಿತಗಳಂತೆ ಇಲ್ಲಿನ 'ಮಂಕುತಿಮ್ಮ' ಅಂಕಿತ ಪ್ರಧಾನವಲ್ಲ. ಅದರ ಒಳತಿರುಳು ಮುಖ್ಯ. ಜೊತೆಗೇ ಈ ಕಗ್ಗ ಮುಂದುವರೆಯುವ ಲಕ್ಷಣಗಳೂ ಮೊದಲೇ ಬಂದಿವೆ.

ಸಂದೇಹವೀ ಕೃತಿಯೊಳಿನ್ನಿಲ್ಲವೆಂದಲ್ಲ
ಇಂದು ನಂಬಿಹುದೆ ಮುಂದೆಂದು–
ಮೆಂಪಲ್ಲ
ಕುಂದು ತೋರ್ದಂದದನು
ತಿದ್ದಿಕೊಳೆ ಮನಸುಂಟು
ಇಂದಿಗೀ ಮತವುಚಿತ–ಮಂಕುತಿಮ್ಮ

ಹೀಗಾಗಿ ಮರುಳು ಮುನಿಯನ ಕಗ್ಗ ಮೊದಲ ಕಗ್ಗದ ಬೆಳವಣಿಗೆಯಷ್ಟೇ. ಇಂದಿನ ಮತದಂತೆ ಮಂಕುತಿಮ್ಮನ ಬೇಡಿಕೆಯಿದು ;

ಆರ ಕೈ ತುತ್ತಿಗಂ ನಿನ್ನ ಕಾಯಿಸದೆ ವಿಧಿ
ಯಾರ ಭುಜಕಂ ನಿನ್ನ ಭಾರವಾಗಿಸದೆ
ಆರ ಸೆಲೆ ಸುಳಿವುವ್
ಅಂಟದವೊಲಾಗಿಸಿ ನಿನ್ನ
ಪಾರುಗಾಣಿಸಬೇಡು – ಮಂಕುತಿಮ್ಮ

ವೇದಾಂತ ವಾಕ್ಯಗಳ
ಸಮುಕಾನುವಾಕಗಳ
ಕೇದಾರ ಗೌಳ ಮಣಿರಂಗಾರಭಿಗಳ
ನಾದಂಗಳಲಿ ಮನವ ಬೆರೆಸಿ
ನಿನುತ್ಕ್ರಮಿಸೆ
ಸಾಧನವೊ ಮುಕ್ತಿಗದು ಮಂಕುತಿಮ್ಮ

**–ಬಿ.ಎನ್.ಎಸ್.**

---

(18ನೇ ಪುಟದಿಂದ)

## ಎರ್ನಾಕುಲಂಸುತ್ತಮುತ್ತ

ಎರ್ನಾಕುಲಂ ಎಲ್ಲ ಅನುಕೂಲಗಳಿರುವ ಬಂದರು–ನಗರ. ಇದರ ಸುತ್ತ ಮುತ್ತ ನಾಲ್ಕು ದಿವ್ಯಕ್ಷೇತ್ರಗಳಿವೆ.

ಷೋರ್‌ನೂರ್ – ಎರ್ನಾಕುಲಂ ರೈಲು ಮಾರ್ಗದ ನಡುವೆ ಇಡೈಪ್ಪಳ್ಳಿ ಸ್ಟೇಷನ್‌ಗೆ ಪೂರ್ವದಲ್ಲಿ ಹೆದ್ದಾರಿಯಲ್ಲಿ ಎರಡು ಮೈಲಿ ದೂರದಲ್ಲಿ ತಿರುಕಾಟ್ಕರೈ (ತಿರುಕ್ಕಾರ್‌ಕರೈ, ತೆನ್ ತಿರುಕ್ಕಾರ್‌ಕರೈ) ಎನ್ನುವ ದಿವ್ಯದೇಶವಿದೆ. ಎರ್ನಾಕುಲಂ ರೈಲ್ವೆ ನಿಲ್ದಾಣದಿಂದ ಈಶಾನ್ಯಕ್ಕೆ ಏಳು ಮೈಲಿ ದೂರದಲ್ಲಿರುವುದರಿಂದಲೂ ತಿರುಕಾಟ್ಕರೈನಲ್ಲಿ ವಸತಿ, ಭೋಜನ ಸೌಕರ್ಯ ಇಲ್ಲದೆ ಇರುವುದರಿಂದಲೂ, ಎರ್ನಾಕುಲಂನಲ್ಲಿ ಉಳಿದುಕೊಳ್ಳುವುದೆ ವಿಹಿತ ಕಾಟ್ಕರೈಯನ್, ಪೆರುಂಶೆಲ್ವನಾಯಕಿ ಪುಷ್ಕಲ ವಿಮಾನ, ಕಪಿಲ ತೀರ್ಥ, ದಕ್ಷಿಣ ತಿರುಮುಖಮಂಡಲ, ನಿಂತ ನಿಲುವು, ಕಪಿಲ ಋಷಿಗೆ ಪ್ರತ್ಯಕ್ಷ–ಇವು ಇಲ್ಲಿನ ಪ್ರಭಾವಗಳು. ನಮ್ಮಾಳ್ವಾರ್‌ರವರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಕೊಚ್ಚಿನ್–ಷೋರನೂರು ದಾರಿಯಲ್ಲಿ ಆಲ್ವೇಗೆ ಉತ್ತರದಲ್ಲಿ ಅಂಗಮಾಲಿ ರೈಲ್ವೆ ನಿಲ್ದಾಣವಿದೆ. ಇಲ್ಲಿಂದ ಪೂರ್ವದಲ್ಲಿ ಹೆದ್ದಾರಿಯಲ್ಲಿ 6 ಮೈಲಿಗಳ ದೂರದಲ್ಲಿ ತಿರುಮೂಳಿಕ್ಕಳಮ್ (ತಿರುಮೂಲಿಕ್ಕಲಂ) ಎನ್ನುವ ದಿವ್ಯಕ್ಷೇತ್ರವಿದೆ. ಆಲ್ವೆಯಿಂದಲೂ ಇಲ್ಲಿಗೆ ಬರಬಹುದು. ಇಲ್ಲಿ ಛತ್ರವೊಂದಿದ್ದರೂ ಭೋಜನ ಸೌಕರ್ಯವಿಲ್ಲ. ತಿರುಮೂಳಿಕ್ಕತ್ತಾನ್ ಮಧುರವೇಣಿ ನಾಚ್ಚಿಯಾರ್, ಸೌಂದರ್ಯ ವಿಮಾನ, ಪೆರುಂಕುಳ ತೀರ್ಥ, ಪೂರ್ವ ತಿರುಮುಖ ಮಂಡಲ, ನಿಂತ ನಿಲುವು, ಹಾರೀತ ಮಹಾಮುನಿಗೆ ಪ್ರತ್ಯಕ್ಷ–ಇವು ಇಲ್ಲಿನ ಪ್ರಭಾವ. ನಮ್ಮಾಳ್ವಾರ್, ತಿರುಮಂಗೈ ಆಳ್ವಾರ್‌ರವರುಗಳಿಂದ ಮಂಗಳಾಶಾಸನವಾಗಿದೆ. ಇಲ್ಲಿ ತಯಾರ್ ಸನ್ನಿಧಿ ಇಲ್ಲ. ಭಗವತಿಯ ಸನ್ನಿಧಿ ಇದೆ. ಪೂಜಾ ಕಾಲದಲ್ಲಿ ವಾದ್ಯಘೋಷವಾಗುವುದಿಲ್ಲ. ದೇವಸ್ಥಾನದ ಪಕ್ಕದಲ್ಲಿ ಆಲವಾಯಿ ನದಿಯು ಹರಿಯುತ್ತದೆ.

ಷೋರನೂರು–ಗುರುವಾಯೂರು ರಸ್ತೆಯಲ್ಲಿ ಪಟ್ಟಾಂಬಿ ರೈಲ್ವೆ ನಿಲ್ದಾಣದ ದಕ್ಷಿಣಕ್ಕೆ ಒಂದು ಮೈಲಿ ದೂರದಲ್ಲಿ 'ವಿತ್ತುವ ಕ್ಕೋಡು' ಎಂಬ ದಿವ್ಯಕ್ಷೇತ್ರವಿದೆ. ಇದನ್ನು ಸಾಮಾನ್ಯವಾಗಿ ತಿರುಮಿತ್ರಕ್ಕೋಡು ಎಂದು ಕರೆಯುತ್ತಾರೆ ಆದರೂ ಇದನ್ನು ತಿರುವಿಥುವ ಕ್ಕೋಡು ಅಥವಾ ಮುದುಕ್ಕೋಡು ಎಂದೂ ಕರೆಯುತ್ತಾರೆ. ಭರತಪುಷಾ ನದಿಯ ದಡದಲ್ಲಿದೆ. ಒಂದೇ ಪ್ರಾಕಾರ. ಗರ್ಭಗುಡಿ ವರ್ತುಲಾಕಾರವಾಗಿದೆ. ಮೇಲ್ಛಾವಣಿ ತಾಮ್ರ ಪಟದಿಂದ ಮುಚ್ಚಿದೆ. ಇಲ್ಲಿಯ ಪೂಜೆ ಆಗಮೋಕ್ತವಾದುದಲ್ಲ. ತೀರ್ಥ ವಿನಿಯೋಗ, ಶಠಾರಿಗಳಿಲ್ಲ. ತುಳಸಿ, ಶ್ರೀಗಂಧಗಳನ್ನು ಪ್ರಸಾದವಾಗಿ ನೀಡುತ್ತಾರೆ. ಇಲ್ಲಿಯ ಅರ್ಚಕರನು ಪುಟ್ಟಿ (ಬ್ರಾಹ್ಮಣ) ಎಂದು ಕರೆಯುತ್ತಾರೆ. ಆತ ನದಿಯಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲಿ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡುತ್ತಾನೆ. ಉಯವನ್ದ ಪ್ಪೆರುಮಾಳ್, ವಿತ್ತುವಕ್ಕಾಟ್ಟುವಲ್ಲಿ ನಾಚ್ಚಿಯಾರ್, ರತ್ನಕಾಂತ ವಿಮಾನ, ಚಕ್ರತೀರ್ಥ, ದಕ್ಷಿಣ ತಿರುಮುಖಮಂಡಲ, ಭುಜಂಗಶಯನ, ಅಂಬರೀಷನಿಗೆ ಪ್ರತ್ಯಕ್ಷ–ಇವು ಇಲ್ಲಿನ ಪ್ರಭಾವಗಳು. ಕುಲಶೇಖರಾಳ್ವಾರರು ಮಂಗಳಾ ಶಾಸನ ಮಾಡಿದ್ದಾರೆ.

ತಿರುನ್ನಾವಾಯ್ ರೈಲ್ವೇನಿಲ್ದಾಣದಿಂದ ಒಂದು ಮೈಲಿದೂರದಲ್ಲಿ, ಷೋರನೂರು ಶಿರೂರ್, ನಡುವಣ ಎಡಕುಳಂಗೆ ದಕ್ಷಿಣದಲ್ಲಿ ಭಾರತೀ ನದಿಯ ದಡದಲ್ಲಿ ತಿರುನಾವಾಯ್ (ತಿರುನಾಹವಾಯ್) ಎನ್ನುವ ದಿವ್ಯಕ್ಷೇತ್ರವಿದೆ. ಸತ್ರವಿದೆ, ತಂಗಲು ನಾಕಷ್ಟು ಅವಕಾಶ ಉಂಟು. (ತಿರುವನಂತಪುರಕ್ಕೆ ಉತ್ತರದಲ್ಲಿ 2? ಮೈ. ದೂರದಲ್ಲಿ ಜನಾರ್ಧನಕ್ಕೆ ಪೂರ್ವದಲ್ಲಿ 7 ಮೈ. ಗಳ ದೂರದಲ್ಲಿ ನಾವಾಯ್‌ಕ್ಕುಳಂ ಎನ್ನುವ ಊರಿದೆ. ಇದನ್ನು ತಿರುನಾವಾಯ್ ಎಂದು ಕೆಲವರು ಹೇಳಿದರೂ ಅದು ಸರಿಯಲ್ಲ. ಅಲ್ಲಿನ ಶಂಕರನಾರಾಯಣ ಸನ್ನಿಧಿಯು ನೋಡಲರ್ಹವಾದುದು ) ಇಲ್ಲಿನ ಪ್ರಭಾವ ವೆಂದರೆ–ನಾರಾಯಣನ್, ನಾವಾಯ್‌ಮುಕುಂದನ್, ಮಲರ್‌ಮಂಗೈ ನಾಚ್ಚಿಯಾರ್, ವೇದವಿಮಾನ ಶೆಂಗಮಲ ಸರಸ್ಸು, ದಕ್ಷಿಣ ತಿರುಮುಖ ಮಂಡಲ ನಿಂತ ನಿಲುವು, ಗಜೇಂದ್ರ, ಲಕ್ಷ್ಮಿಯರಿಗೆ ಪ್ರತ್ಯಕ್ಷ ನಮ್ಮಾಳ್ವಾರ್, ತಿರುಮಂಗೈ ಆಳ್ವಾರುರವುಕ್ಕಲ ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ. ತಿರುಚ್ಚಿ ಪಕ್ಕದಲ್ಲಿನ ಇರಂಜಕ್ಕಲಂ ಕ್ರೈಟ್ಸ್ ನಿಲ್ದಾಣದಿಂದ ತಿರುವಲಕುಂಜಿ (ಅಂಜಕ್ಕಲಂ) ಎನ್ನುವ ಕುಲಶೇಖರಾಳ್ವಾರರ ಜನ್ಮಸ್ಥಳಕ್ಕೆ ಇಲ್ಲಿಂದ ಮುಂದುವರೆದು ಹೋಗಬಹುದು.

★

# ಕುರುಕ್ಷೇತ್ರದ ಇತಿಹಾಸ

ಶರೀರದ ಹಿಂದೊಂದೇ ಭಾಗವನ್ನು ಕಡಿದು ಎಸೆದಾಗ ವಿಷ್ಣುವಿನಿಂದ ಆ ಪ್ರದೇಶವನ್ನು ತನ್ನ ವಾಸಕ್ಕಾಗಿ ಕುರುರಾಜನು ಪಡೆದುಕೊಂಡಿದ್ದ ಆದುದರಿಂದ ಆ ಸ್ಥಳಕ್ಕೆ ಕುರುಕ್ಷೇತ್ರ ಎಂಬ ಹೆಸರು ಬರುವಂತಾಯಿತು. ವೇದ ವೇದಾಂತಾದಿಗಳಲ್ಲಿ ಹಾಗೂ ಪುರಾಣಗಳ ಪುಣ್ಯಕಥೆಗಳಲ್ಲಿ ವರ್ಣಿಸಲ್ಪಡುವ ಬ್ರಹ್ಮ ಸರೋವರವಿರುವುದು ಈ ಕುರುಕ್ಷೇತ್ರದಲ್ಲಿಯೇ. ರಾಜಾಪುರೂರವಸನನ್ನು ಬಿಟ್ಟು ಹೊರಟುಹೋಗಿದ್ದ ದೇವಲೋಕದ ಅಪ್ಸರೆಯಾದ ಊರ್ವಶಿಯು ಪುನಃ ಜಲಕ್ರೀಡೆಗಾಗಿ ಈ ಸರೋವರಕ್ಕೆ ಬಂದಾಗ ಪ್ರೇಮಿ ಪುರೂರವನಿಗೆ ಮತ್ತೊಮ್ಮೆ ಆಕೆಯ ದರ್ಶನ ಲಭಿಸಿತು. ಇವರಿಬ್ಬರ ಪ್ರೇಮದಕಥೆ ಬಹು ರೋಚಕ. ಇದೇ ಸರೋವರದ ಪರಿಸರದಲ್ಲಿ ಪುರಾಣ ಪ್ರಸಿದ್ಧವಾದ ಕುರುಪಾಂಡವರ ಯುದ್ಧವು ನಡೆಯಿತು. ಯುದ್ಧಾರಂಭವಾಗುವ ಮುನ್ನ ಪಾಂಡವರು ಇಲ್ಲಿರುವ ಸ್ಥಾನೇಶ್ವರ ಹಾಗೂ ಕಾಲಿಕಾಮಾತಾ ದೇವಮಂದಿರಗಳಿಗೆ ಹೋಗಿ ಭಕ್ತಿಯಿಂದ ಪೂಜಿಸಲ್ಲಿಸಿದ್ದರು. ಕೌರವ ಹಾಗೂ ಪಾಂಡವರ ಸೇನೆಗಳು ಬೀಡುಬಿಟ್ಟ ಸ್ಥಳವೂ ಈ ಕುರುಕ್ಷೇತ್ರದ ನೆಲವೆನಿಸುವುದು. ಇಂದು ಗುಪ್ತಗಾಮಿನಿ ಎನಿಸಿದ ಸರಸ್ವತೀನದಿಯ ಹೊಳಹುಗಳನ್ನು ಇಲ್ಲಿ ನಾವುಕಂಡುಹಿಡಿಯಬಹುದು. ಕುಲಪಿತಾಮಹರೆನಿಸಿಕೊಂಡಿದ್ದ ಭೀಷ್ಮರು ಸೂರ್ಯಕುಂಡದ ಸಮೀಪದಲ್ಲಿ ಶರಪಂಜರದ ಮೇಲೆ ಮಲಗಿಕೊಂಡು ಉತ್ತರಾಯಣ ಪುಣ್ಯಕಾಲವನ್ನು ನಿರೀಕ್ಷಿಸುತ್ತಿದ್ದ ಆ ತಾಣವನ್ನು ನಾವು ನೋಡಬಹುದು. ರಥಚಕ್ರಗಳು ಭೂಮಿಯಲ್ಲಿ ಹೂತು ಹೋಗಿರುವಾಗ ಸ್ವಲ್ಪಕಾಲಾವಕಾಶವನ್ನು ಕೊಡು, ಎಂದು ಕೂಗಿ ಕೂಗಿ ಯಾವ ಸ್ಥಳದಲ್ಲಿ ನಿಂತು ದಾನಶೂರನೆನಿಸಿದ ಕರ್ಣನು ಕೂಗಿಕೊಂಡಿದ್ದನೋ ಆ ತಾಣವನ್ನು "ರಾಜಾ ಕರ್ಣ ಕಾಟೀಲಾ" ಎಂಬ ಹೆಸರಿನಿಂದ ಈಗಲೂ ಗುರುತಿಸಬಹುದು. (ಅದು ಕುರುಕ್ಷೇತ್ರ ವಿದ್ಯಾಪೀಠದ ಸಮೀಪದಲ್ಲಿರುವುದು.) ಮಹಾವೀರಾಧಿವೀರ ಎಂದೆನಿಸಿಕೊಂಡ ಅಭಿಮನ್ಯು ಚಕ್ರವ್ಯೂಹದಲ್ಲಿ ಯಾವ ಸ್ಥಳದಲ್ಲಿ ಸಿಕ್ಕಿಹಾಕಿಕೊಂಡಿದ್ದನೋ ಆ ಸ್ಥಳವನ್ನೂ ಕಾಣಬಹುದು. ಪಾಂಡವರ ಅನಂತರ ಪಟ್ಟಕ್ಕೆ ಬಂದನಂತರ ಅವರ ಮೊಮ್ಮಗನೆಂದೆನಿಸಿಕೊಂಡ ಜನಮೇಜಯ ರಾಜನು ಸರ್ಪಯಾಗ ಮಾಡಿದನೆಂದು ಹೇಳುವ ಸ್ಥಳವನ್ನು ಈ ಜಿಲ್ಲೆಯಲ್ಲಿ ನಾವು ನೋಡಬಹುದು. ಇವೆಲ್ಲಕ್ಕೂ ಹೆಚ್ಚಾಗಿ ವಿಶ್ವಮಾನ್ಯನಾದ ಶ್ರೀಕೃಷ್ಣನು ತನ್ನ ಆಪ್ತಮಿತ್ರನಿಗೆ ಯಾವಸ್ಥಳದಲ್ಲಿ ರಥವನ್ನು ನಿಲ್ಲಿಸಿ ಗೀತೋಪದೇಶಮಾಡಿದನೋ ಆ ಪುಣ್ಯಸ್ಥಳದ ಮಣ್ಣನ್ನು ಹಣೆಗಂಟಿಸಿಕೊಳ್ಳಬಹುದು. ಈ ಎಲ್ಲ ಕಾರಣಗಳಿಂದ ಕುರುಕ್ಷೇತ್ರವನ್ನು ಭಾರತೀಯ ಸಂಸ್ಕೃತಿಯ ಹೃದಯವೆಂದು ಕರೆದರೆ ತಪ್ಪಾಗಲಾರದು.

ಇತಿಹಾಸ ಪುರಾಣಗಳ ಅಭ್ಯಾಸಗಳಿಗೆ ಈ ವಿಚಾರವು ತಿಳಿದ ಮಾತಾಗಿರುವುದು. ಕ್ರಿ.ಶ. 1526 ರಲ್ಲಿ ಬಾಬರನು ಪಾನೀಪತ ಯುದ್ಧದಲ್ಲಿ ಗೆದ್ದು ಆಗ್ರಾ, ಹಾಗೂ ದಿಲ್ಲಿ –ಇವುಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುವವರೆಗೆ ಉತ್ತರಭಾರತದಲ್ಲಿ ಲೋಧಿ ಮನೆತನದ ಪಠಾಣರು ರಾಜ್ಯವನ್ನಾಳುತ್ತಿದ್ದರು. ಈ ಮನೆತನದಲ್ಲಿಯ ಸಿಕಂದರ ಲೋಧಿ ಎಂಬಾತನು ಕ್ರಿ.ಶ. 1510 ರಲ್ಲಿ ಆಗ್ರಾ, ದಿಲ್ಲಿ ಇವುಗಳನ್ನಾಳುತ್ತಲಿದ್ದ ಈತ ತನ್ನ ತಂದೆಯ ಕಾಲದಲ್ಲಿ ಕುರುಕ್ಷೇತ್ರ ವಿಭಾಗದ ಪ್ರಶಾಸಕನೆಂದು ಕೆಲಸಮಾಡುತ್ತಿದ್ದ. ಈ ಗ್ರಂಥ ನಿಷ್ಠ ತರುಣನಿಗೆ ಕುರುಕ್ಷೇತ್ರದಲ್ಲಿರುವ ಬ್ರಹ್ಮಸರೋವರ, ಹಾಗೂ ಸ್ಥಾನೇಶ್ವರ ದೇವಾಲಯಗಳು ಕಣ್ಣಿಗೆ ಚುಚ್ಚುತ್ತಿದ್ದವು. ಬ್ರಹ್ಮ ಸರೋವರದಲ್ಲಿ ಸ್ನಾನಮಾಡಲು ದೇಶದ ನಾನಾಭಾಗಗಳಿಂದ ಹಿಂದುಗಳು ಬರುತ್ತಿರುವುದನ್ನು ಕಂಡಾಗ ಆತನ ಮನಸ್ಸು ತಳಮಳಗೊಳ್ಳುತ್ತಿತ್ತು.

---

**ಶ್ರೀ ಆದ್ಯ ರಾಮಾಚಾರ್ಯ**

---

ಸಿಕಂದರಲೋಧಿ ಈತನು ತನಗೆ ಯಾರ ಅನುಕೂಲರಾಗಬಹುದೋ ಅಂಥ ಪಂಡಿತ ಸಭೆಯೊಂದನ್ನು ಕೂಡಿಸಿದ, ಅವರೆಲ್ಲ ಮಹಾಪರ್ವ ಕುಂಭಮೇಳಕ್ಕಾಗಿ ಕುರುಕ್ಷೇತ್ರದಲ್ಲಿ ಸೇರುತ್ತಿದ್ದ ಹಿಂದುಗಳನ್ನು ಅಲ್ಲಿ ಬರದಂತೆ ಮಾಡಲು ಬ್ರಹ್ಮಸರೋವರವನ್ನೇ ನಾಶಪಡಿಸಿದರೆ ಹೇಗೆ? ಎಂಬವಿಚಾರವನ್ನು ಪಂಡಿತೋತ್ತಮರಾದ ಮುಲ್ಲಾ ಮೌಲ್ವಿ ಆದಿಗಳ ಮುಂದೆ ಮಂಡಿಸಿದ. ಆಗ ಅವರೆಲ್ಲರಿಗೂ ಮುಕುಟ ಪ್ರಾಯರೆನಿಸಿಕೊಳ್ಳುತ್ತಿದ್ದ ಮಿಯಾ ಅಬ್ದುಲ್ಲಾ ವರೂ ಸಹ ಅಂದಿನ ದರ್ಬಾರಿನಲ್ಲಿ ಉಪಸ್ಥಿರಿದ್ದರು, ಆದುದರಿಂದ ಪಂಡಿತರು, ಧರ್ಮಶಾಸ್ತ್ರಗಳ ವಿಚಾರದಲ್ಲಿ ಮಹಾ ಪಂಡಿತರೆಂದೆನಿಸಿಕೊಂಡ ಮಿಯಾ ಅಬ್ದುಲ ಅಜೋಧನಿ ಇವರು ಈ ವಿಚಾರದಲ್ಲಿ ಯಾ ನಿರ್ಣಯವನ್ನೀಯುತ್ತಾರೆಯೋ ಮಾತನ್ನೇ ತಾವೆಲ್ಲರೂ ಒಪ್ಪಿಕೊಳ್ಳುವುದಾ ತಿಳಿಸಿದರು. ಸಿಕಂದರಲೋಧಿ ಸಮೀಪದ ಪಂಡಿತರಾಗಿದ್ದ ಮಿಯಾ ಅಬ್ದುಲ್ಲಾ ರತ್ತ ಹೊರಳಿ,

"ಈ ವಿಚಾರದಲ್ಲಿ ತಮ್ಮ ಅಭಿಪ್ರಾಯನೆಂಬುದನ್ನು ತಿಳಿಸಬಹುದಲ್ಲವೆ" ಎಂ ನುಡಿದ. ಆಗ ಮಿಯಾ ಅಬ್ದುಲ್ಲಾ ಅಜೋಧನಿಯವರು,

ಕುರುಕ್ಷೇತ್ರ ಕ್ಯಾ ಚೀಜಹೈ (ಕುರುಕ್ಷೇತ್ರವೆಂದರೇನು) ಎಂದು ಲೋಧಿಗೆ ಪ್ರಶ್ನೆ ಮಾಡಿದರು.

"ಈ ಕುರುಕ್ಷೇತ್ರಕ್ಕೆ ಸಾವಿರಾರು ಸಂಖ್ಯೆಯಲ್ಲಿ ಹಿಂದುಗಳು ಬರುತ್ತಾರೆ" ಲೋ ಉತ್ತರಿಸಿದ.

"ಹಾಗಾದರೆ ಈ ಪದ್ಧತಿಯು ಎನಿಂದ ಆರಂಭವಾಗಿದೆ ಎಂಬುದನ್ನು ತಿಳಿಸುವಿರಾ ?"

"ಕಾಲಮಿತಿಯನ್ನು ಹೇಳಲು ಸಾಧ್ಯವಿಲ್ಲ ಹು ಹಿಂದಿನಿಂದಲೂ ಈ ಪದ್ಧತಿ ನಡೆದು ಕೊಂಡು ಬರುತ್ತಲಿದೆ ಎಂದು ಕೇಳಿದ್ದೇವೆ"

ಸಿಕಂದರಲೋಧಿಯ ಮುಖದಿಂದ ಈ ವರಣೆಗಳನ್ನು ಕೇಳಿದ ಮಿಯಾ ಬ್ದುಲ್ಲಾರವರು.

"ಪ್ರಾಚೀನ ದೇವಮಂದಿರಗಳನ್ನು ನಾಶ ಾಡುವುದು ಯಾವ ರೀತಿಯಿಂದಲೂ ೋಗ್ಯವೆನಿಸುವುದಿಲ್ಲ, ಹಳೆಯ ಪರಂಪರೆ ಳನ್ನು ನಾಶಪಡಿಸಲು ನಮ್ಮ ಶಾಸ್ತ್ರವು ಮ್ಮತಿಸುವುದಿಲ್ಲ"

ಮಿಯಾ ಅಬ್ದುಲ್ಲಾರವರ ಮಾತು ಿಂದ ಸಿಕಂದರಲೋಧಿಗೆ ಅವಮಾನವಾ ಂತೆನಿಸಿತು, ದುರುದ್ದೇಶದಿಂದ ತನ್ನ ಮನ ್ಸಿನ ವಿರುದ್ಧವಾಗಿ ಈ ಪಂಡಿತರು ನಿರ್ಣಯ ನ್ನಿತ್ತಿದ್ದಾರೆಂದು ಭಾವಿಸಿದ. ಸಿಟ್ಟು ಸಹಿ ಾಯಿತು, ತನ್ನ ಖಡ್ಗದಮೇಲೆ ಕೈಯನ್ನಿ ದ ಆತನು.

"ತಮ್ಮ ಈ ಅಭಿಪ್ರಾಯವು ಪಕ್ಷಪಾತ ದ ಕೂಡಿದೆ, ಆದುದರಿಂದ ಮೊದಲು ಮ್ಮನ್ನು ತುಂಡರಿಸಿ ಚೆಲ್ಲಿದ ನಂತರ ಈ ರುಕ್ಷೇತ್ರವನ್ನೇ ಧ್ವಂಸಮಾಡುತ್ತೇನೆ" ದು ಅಬ್ಬರಿಸತೊಡಗಿದ.

ಮಿಯಾ ಅಬ್ದುಲ್ಲಾರವರು ಮಾತ್ರ ನ ಕೋಪಾಟೋಪಗಳಿಗೆ ಸ್ವಲ್ಪವೂ ವರಲಿಲ್ಲ, ವಿಚಲಿತರಾಗಲಿಲ್ಲ, ಗಂಭೀರ ನಿಯಲ್ಲಿ ಅವರು ನುಡಿದರು.

"ಪರಮೇಶ್ವರನ ಆಜ್ಞೆಯ ವಿನಃ ಯಾರೂ ಾರನ್ನೂ ಕೊಲ್ಲಲು ಸಾಧ್ಯವಿಲ್ಲ. ಇನ್ನು ರಣಕ್ಕಂತೂ ನಾವು ಹೆದರುವುದಿಲ್ಲ, ಈ ಷಯದ ಬಗ್ಗೆ ನಮ್ಮ ಅಭಿಪ್ರಾಯವೇ ಬುದನ್ನು ತಾವು ತಿಳಿಸಲು ಹೇಳಿದಿರಿ, ದಕ್ಕಾಗಿಯೇ ತೋಚಿದುದನ್ನು ನಾವು ಳಿದ್ದೇವೆ, ತಮಗೆ ಶಾಸ್ತ್ರದ ಒಪ್ಪಿಗೆಯು ಕಾಗಿದಿದ್ದಲ್ಲಿ ನಮಗೇಕೆ ಈ ಪ್ರಶ್ನೆಯನ್ನು ಕಿದಿರಿ"

ನಿರ್ಭೀತರಾಗಿ ಉತ್ತರಿಸುತ್ತಿರುವುದನ್ನು ಡು ಅಲ್ಲಿ ಮಿಳಿತರಾದವರೆಲ್ಲ ಗಾಬರಿ ಾಗಿಹೋದರು. ಇನ್ನು ಎಂಥ ಅನಾಹುತವು ಕಾದಿದೆಯೋ ಎಂದು ಭಯಭೀತರಾದರು. ದರ್ಬಾರು ಮುಗಿದೊಡನೆ ಎಲ್ಲರೂ ಹೊರಟುಹೋದರು, ಸಿಕಂದರಲೋಧಿ ಮಿಯಾ ಅಬ್ದುಲ್ಲಾರವರನ್ನು ಪುನಃ ತನ್ನ ಸಮ್ಮುಖಕ್ಕೆ ಬರಮಾಡಿಕೊಂಡ, ಅತ್ಯಂತ ವಿನಯದಿಂದ ಆತನು ಹೇಳಿದ,

"ನನ್ನಮೇಲೆ ತಾವು ಕೋಪಿಸಿಕೊಳ್ಳ ಬಾರದು, ಬಿಡುವಾದಾಗ ಆಗಾಗ ತಮ್ಮ ಸಹವಾಸವು ನಮಗೆ ಲಭಿಸುವಂತೆ ಅನುಗ್ರಹ ಮಾಡಬೇಕು" ಎಂದು ಕೇಳಿಕೊಂಡ.

ಓರ್ವನಿಷ್ಠಾವಂತ ಮೌಲ್ವಿಗಳ ಉದಾರತನ ದಿಂದಾಗಿ ಅಂದು ಕುರುಕ್ಷೇತ್ರವು ಸುರಕ್ಷಿತವಾಗಿ ಉಳಿಯುವಂತಾಯಿತು. ಅಲ್ಲಿರುವ ಬ್ರಹ್ಮಸರೋವರಕ್ಕೆ ಬಂದಿದ್ದ ವಿಪತ್ತು ತಾನಾಗಿಯೇ ದೂರಾಗುವಂತಾಯಿತು.

ಮಧ್ಯಂತರ ಕಾಲದಲ್ಲಿ ಈ ಕ್ಷೇತ್ರದಲ್ಲಿರುವ ಸ್ಥಾಣೇಶ್ವರ ದೇವಾಲಯದ ಮಹಾನಿಲಯಗಳೆಲ್ಲ ಮಸೀದಿಗಳಾಗಿ ರೂಪಾಂತರಗೊಂಡವು ಎಂದು ಹೇಳುತ್ತಾರೆ, ಈ ವಿಚಾರದಲ್ಲಿ ಔರಂಗಜೇಬನ ಕಾಲದಲ್ಲಿ 1667 ರಲ್ಲಿ ಎರಡು ಬಾತಮೀಪತ್ರಗಳು ನಮಗೆ ಕಾಣಸಿಗುತ್ತವೆ. ಈ ಪತ್ರಗಳನ್ನು ಅಭ್ಯಾಸ ಮಾಡಿದ ಪುಣೆಯ ಭಾರತ ಇತಿಹಾಸ ಸಂಶೋಧನ ಮಂಡಲದ ಹಿರಿಯರಾಗಿದ್ದ ಶ್ರೀ ಗ. ಹ. ಖರೆಯವರು, ಈ ಪತ್ರಗಳನ್ನು ಕುರಿತು;

"ಸ್ಥಾಣೇಶ್ವರನಿವಾಸಿಗಳಾದ ಬ್ರಾಹ್ಮಣರ ಗುಂಪು ಬಾದಶಹನಾಗಿದ್ದ ಔರಂಗಜೇಬನ ಸನ್ನಿಧಾನಕ್ಕೆ ಬಂದು ತಾವು ವಾಸವಾಗಿದ್ದ ಕುರುಕ್ಷೇತ್ರದ ಪರಿಸ್ಥಿತಿಯನ್ನು ವಿವರಿಸಿದರು, ಮಹಮ್ಮದ ಶೇಖ ಅಮೀರ್ ಇವರ ಮಕ್ಕಳಾದ ಮೀರ್ ಇಬ್ರಾಹೀಂ ತಮ್ಮ ಸಂಗಡಿಗರೊಂದಿಗೆ ಲಾಹೋರಿನಿಂದ ಮರಳುವಾಗ ಕುರುಕ್ಷೇತ್ರದಲ್ಲಿರುವ ಸ್ಥಾಣೇಶ್ವರ ದೇವಾಲಯದ ಸರೋವರದಲ್ಲಿ ವಿಪರೀತ ಗಲಾಟೆಮಾಡಿದರು. ಸಾಧುಸಂತರು ವಾಸ ಮಾಡುತ್ತಿದ್ದ ಮಂಟಪಗಳನ್ನೆಲ್ಲ ಧ್ವಂಸ ಗೊಳಿಸಿದರು. ಈ ವಿಧ್ವಂಸಕ ಕೃತ್ಯಗಳು ನಡೆದಾಗ ಸ್ಥಳೀಯ ನಿವಾಸಿ ಗಳಾದ ಕಾಜಿಗಳನ್ನೂ ಸಹ ಕಲೆಸಿಕೊಂಡಿದ್ದರು. ಇದರಿಂದಾಗಿ ನಮಗೆಲ್ಲ ತೊಂದರೆಗಳಾಗಿವೆ, ಆದುದರಿಂದ ಹುಜೂರ್‌ರು ಈ ವಿಚಾರದಲ್ಲಿ ಯೋಗ್ಯ ನಿರ್ಣಯವನ್ನೀಯಬೇಕೆಂದು ಕೇಳಿಕೊಂಡರು. ಹಿಂದುಗಳ ಈ ಅಹವಾಲನ್ನು ಕೇಳಿದ ಬಾದಶಹ ಔರಂಗಜೇಬನು;

"ಕುರುಕ್ಷೇತ್ರದಲ್ಲಿ ಅನೇಕ ಧರ್ಮ ವಿರೋಧಿ ಚಟುವಟಿಕೆಗಳು ನಡೆಯುತ್ತಲಿವೆ, ಈಗಾಗಲೇ ಅನೇಕಸಲ ನಮಗೆ ದೂರುಗಳು ಬಂದಿವೆ, ಆದುದರಿಂದ ಆ ಕ್ಷೇತ್ರದಲ್ಲಿರುವ ಬ್ರಹ್ಮಸರೋವರದ ನಾಲ್ಕೂ ದಂಡೆಗಳನ್ನು ಒಡೆದು ಹಾಕಬೇಕು ಹಾಗಾದರೆ ಮಾತ್ರ ಹಿಂದುಗಳು ಆ ಸ್ಥಳಕ್ಕೆ ಬರದಂತಾಗುವುದು, ಆದುದರಿಂದ ಈ ಕೆಲಸವನ್ನು ನಿರ್ವಹಿಸಲು ಸ್ಥಳೀಯ ಫೌಜುದಾರನಾದ ಅಜೀಜ್‌ಖಾನ್ – ಈತನಿಗೆ ನಾವು ಆಜ್ಞೆಯನ್ನು ಮಾಡುತ್ತೇವೆ" ಎಂದು ತಿಳಿಸಿದನು.

ಬಂದವನಿಗೆ ಮುಂದೇನುಗತಿ ಎಂಬ ಯೋಜನೆಯಿಟ್ಟುಕೊಂಡಿತ್ತು, ಭಾರವಾದ ಮನದಿಂದ ಅವರು ಮರಳಿಹೋಗಬೇಕಾಯಿತು.

ಈ ಘಟನೆಯು ನಡೆದುಹೋದನಂತರ ನಮಗೆ ದೊರೆತ ಮೇ ಮೂವತ್ತರಂದು ಬರೆಯಲ್ಪಟ್ಟ ಒಂದು ಪತ್ರವನ್ನು ಅಭ್ಯಾಸ ಮಾಡಿದಾಗ ಬಾದಶಹನಿಂದ ಹೊರಟ ಈ ಆಜ್ಞೆಯು ಕಾರ್ಯರೂಪಕ್ಕೆ ಬರುವಂತಾಗಲಿಲ್ಲವೆಂದೆನಿಸುತ್ತದೆ. ಏಕೆಂದರೆ ಈ ಸರೋವರದ ಕೆಳಭಾಗದಲ್ಲಿದ್ದ ಜಮೀನುಗಳೆಲ್ಲ ಫೌಜದಾರ್ ಅಜೀಜ್‌ಖಾನನ ವಶದಲ್ಲಿದ್ದವು, ಬ್ರಹ್ಮಸರೋವರವನ್ನು ವಿಧ್ವಂಸಗೊಳಿಸಿದಲ್ಲಿ ಕೆಳಭಾಗದ ಜಮೀನುಗಳೆಲ್ಲ ಬಂಜರ ಭೂಮಿಯಾಗುತ್ತಿತ್ತು, ಬರುವ ಆದಾಯವೆಲ್ಲ ನಿಂತುಹೋಗುತ್ತಿತ್ತು, ಆದುದರಿಂದ ಆ ಅಧಿಕಾರಿಯು ಬ್ರಹ್ಮಸರೋವರಕ್ಕೆ ಯಾವುದೇ ತರಹದ ಧಕ್ಕೆಯಾಗದಂತೆ ಜಾಗ್ರತೆವಹಿಸಿರಬಹುದೆಂದು ಶ್ರೀಖರೆಯವರು ಅಭಿಪ್ರಾಯಪಡುತ್ತಾರೆ. ಅಲ್ಲದೆ ತಾವು ಸ್ವತಃ ಈ ಕ್ಷೇತ್ರಕ್ಕೆ ಭೇಟಿಯನ್ನಿತ್ತಾಗ ಮೊಗಲರ ಕಾಲದಲ್ಲಿದ್ದ ಪದ್ಧತಿಯೊಂದು ಜನರ ನಾಲಿಗೆಯಲ್ಲಿರುವದೆಂಬ

(28ನೇ ಪುಟ ನೋಡಿ)

# ಕಿಶೋರಜಗತ್

# ರಾಜ ಋಷಿಯಾದ

ಶ್ರೀ ಪಂಡರಿನಾಥಾಚಾರ್ಯ ಗಲಗಲಿ



ಮಾಹಿಷ್ಮತಿಯ ದೊರೆಯಾದ ಹೈಹಯನಿಗೆ ಹತ್ತುಜನ ಹೆಂಡತಿಯರು. ಪ್ರತಿಯೊಬ್ಬ ಪತ್ನಿಯಿಂದಲೂ ದೊರೆಗೆ ಹತ್ತು ಹತ್ತು ಮಕ್ಕಳು. ಹೀಗೆ ನೂರು ಮಕ್ಕಳು. ಎಲ್ಲರೂ ಧೀರರು, ಇವರು ಭೂಮಂಡಲದಲ್ಲೆಲ್ಲ ದಿಗ್ವಿಜಯಗೈಯುತ್ತ ಕಾಶೀಖಂಡದ ಅರಸರಾದ ಹರ್ಯಶ್ವ, ಸುದೇವ, ದಿವೋದಾಸ, ಮಾಂಧಾತವರನ್ನೆಲ್ಲ ಸೋಲಿಸಿದರು.

ಮುಂದೆ ದಿವೋದಾಸನಿಗೆ ರಾಜಗುರು ಭರದ್ವಾಜ ಮುನಿಗಳ ಅನುಗ್ರಹದಿಂದ ಪ್ರತರ್ದನನೆಂಬ ವೀರವರೇಣ್ಯನಾದ ಸತ್ಪುತ್ರನು ಜನಿಸಿದನು. ಗುರುಗಳ ವಿಶೇಷ ಅನುಗ್ರಹದಿಂದ ಪ್ರತರ್ದನನು ತನ್ನ ಅಪ್ರತಿಮ ವೀರವಿಕ್ರಮದಿಂದ ಹೈಹಯನ ಮಕ್ಕಳೊಡನೆ ಹೋರಾಡಿ ಆ ನೂರು ಜನ ಸಹೋದರರನ್ನು ರಣಾಂಗಣದಲ್ಲಿ ಕಡಿದು ಚೆಲ್ಲಿ ಮಾರಿಗೆ ಔತಣ ಬಡಿಸಿದ. ಮತ್ತೂ ತನ್ನ ತಂದೆ ತಾತರನ್ನು ಗೆದ್ದು ಅವಮಾನಿಸಿದ ಈ ರಾಜಕುಮಾರರ ತಂದೆಯಾದ ಹೈಹಯ ರಾಜನನ್ನೂ ತಾನು ಕೊಂದು ಸೇಡು ತೀರಿಸಿಕೊಳ್ಳಬೇಕೆಂದು ಪ್ರತರ್ದನನು ಖಡ್ಗ ಹಿಡಿದು ರಾಜಧಾನಿಯ ಕಡೆಗೆ ಹೋದನು. ಈ ಸಮಾಚಾರ ಕೇಳಿ ಹೆದರಿ ಹೌಹಾರಿ ಹೋದ ಹೈಹಯ ಮಹಾರಾಜ 'ಜೀವನ್ ಭದ್ರಾಣಿ ಪಶ್ಯತಿ' ಎಂದೆಂದು ಓಡಿಹೋಗಿ ಭೃಗು ಋಷಿಗಳ ಆಶ್ರಮದಲ್ಲಿ ಅಡಗಿಕೊಂಡ.

ಆಗ ಸೇಡಿನ ಸವಾರಿಯೇರಿದ ಪ್ರತರ್ದನನು ಬತ್ತಲೆಯ ಖಡ್ಗವನ್ನು ಝಳಪಿಸುತ್ತ ಭೃಗುಋಷಿಯ ಆಶ್ರಮಕ್ಕೆ ಬಂದು "ಮಹರ್ಷಿಗಳೆ, ನಿಮ್ಮ ಆಶ್ರಮದಲ್ಲಿ ಅಡಗಿ ಕುಳಿತಿರುವ ಕ್ಷತ್ರಿಯಾಧಮನನ್ನು ಹೊರಗೆ ಬಿಡಿರಿ" ಎಂದು ಕೇಳಿದನು.

ಅದಕ್ಕೆ ಭೃಗುಮುನಿಗಳು "ನಮ್ಮ ಆಶ್ರಮದಲ್ಲಿ ಯಾವ ಕ್ಷತ್ರಿಯನೂ ಬಂದಿಲ್ಲ" ಎಂದು ಹೇಳಿದರು. ಅದನ್ನು ಕೇಳಿ ಪ್ರತರ್ದನನು ಮರಳಿ ಹೋದನು.

ಪ್ರತರ್ದನನು ಹೋದ ಬಳಿಕ ಋಷಿಗಳ ಮಾತು ಸುಳ್ಳಾಗಬಾರದೆಂದು ಹೈಹಯ ಮಹಾರಾಜನು ತನ್ನ ಕ್ಷತ್ರಿಯತ್ವದ ಚಿಹ್ನೆಗಳನ್ನೆಲ್ಲ ತೆಗೆದೊಗೆದು ಬ್ರಾಹ್ಮಣರ ಲಾಂಛನಗಳನ್ನೆಲ್ಲ ಧರಿಸಿ ಊರ್ಧ್ವಪುಂಡ್ರ ಹಚ್ಚಿಕೊಂಡು ಹರಿನಾಮಮುದ್ರಿಕೆಗಳು, ತುಳಸೀಮಾಲೆ, ಮುಂತಾದವುಗಳನ್ನು ಧಾರಣಮಾಡಿ ಅದೇ ಆಶ್ರಮದಲ್ಲಿ ಮುನಿವೃತ್ತಿಯಿಂದ ಜೀವಿಸಹತ್ತಿದ.

ಭೃಗುಋಷಿಗಳ ಬಳಿ ಸರಿಯಾಗಿ ಶಾಸ್ತ್ರಾಧ್ಯಯನ ಮಾಡಿ ಜಪ-ತಪ ಅನುಷ್ಠಾನಗಳನ್ನು ಕೈಗೊಂಡ. ಅವನ ನಾಮಮುದ್ರಾದಿ ಚಿಹ್ನಗಳನ್ನೂ ಮತ್ತು ಅವನು ಸ್ಪಷ್ಟವಾಗಿ ಮಾಡುವ ವೇದಮಂತ್ರಗಳ ಸ್ವರಸಹಿತ ಉಚ್ಚಾರಕ್ರಮವನ್ನು ಕೇಳಿದವನಿಗೆ ಇವನೊಬ್ಬ ಕ್ಷತ್ರಿಯನೆಂದು ಅನಿಸುತ್ತಲೇ ಇರಲಿಲ್ಲ.

ಹೈಹಯವಂಶಧ್ವಂಸದೀಕ್ಷಿತನಾದ ಕಾಶೀ ನರೇಶ ಪ್ರತರ್ದನನಿಗೆ ಹೈಹಯನು ಭೃಗುಋಷಿಯ ಆಶ್ರಮದಲ್ಲಿ ಇಲ್ಲವೆಂದು ಸ್ವಯಂ ಭೃಗುಋಷಿಗಳು ಹೇಳಿದ್ದರೂ, ವಿಶ್ವಾಸವಾಗಿರಲಿಲ್ಲ. ಬ್ರಹ್ಮರ್ಷಿಗಳಾದ ಭೃಗು ಎಂದೂ ಸುಳ್ಳುಮಾತನಾಡುವವರಲ್ಲವೆಂಬುದು ಅವನಿಗೆ ತಿಳಿದಿತ್ತು. ಆದರೆ –

ಸ್ತ್ರೀಷು ನರ್ಮವಿವಾಹೇಷು<br>
ವೃತ್ತ್ಯರ್ಥೇ ಪ್ರಾಣಸಂಕಟೇ ।<br>
ಗೋಬ್ರಾಹ್ಮಣ ಹಿತಾರ್ಥಾಯ<br>
ನಾನೃತಂ ಸ್ಯಾಜ್ಜುಗುಪ್ಸಿತಮ್ ॥

"ಹೆಣ್ಣು ಮಕ್ಕಳ ಮುಂದೆ ವಿನೋದದ ಮಾತಿನಲ್ಲಿ ಮದುವೆಯ ಸಲುವಾಗಿ, ಉಪಜೀವನಕ್ಕಾಗಿ ಪ್ರಾಣಹೋಗುವ ಪ್ರಸಂಗದಲ್ಲಿ ಮತ್ತು ಗೋಬ್ರಾಹ್ಮಣರಿಗೆ ಹಿತ ಮಾಡಲು, ಹಿಂಸೆಯನ್ನು ತಪ್ಪಿಸಲು ಸುಳ್ಳು ಮಾತನಾಡಿದರೂ ಪಾಪವಿಲ್ಲ" ಎಂದು ಶಾಸ್ತ್ರವಚನವೇ ಇದೆಯಲ್ಲ! ಈ ಶಾಸ್ತ್ರವಚನವನ್ನು ತಿಳಿದಿದ್ದ ಪ್ರತರ್ದನನಿಗೆ ಹೀಗೊಂದು ಸಂದೇಹ ಉದಿಸಿತು "ನಾನು ಹೈಹಯನನ್ನು ಕೊಲ್ಲುತ್ತೇನೆಂಬುದನ್ನು ತಿಳಿದ ಋಷಿಗಳು ಹೈಹಯನ ಜೀವ ಉಳಿಸಲು ವೇದ ಶಾಸ್ತ್ರವಚನದ ಅನುಸಂಧಾನ ಮಾಡಿಕೊಂಡು ಸುಳ್ಳು ಹೇಳಿದ್ದರೂ ಹೇಳಿಬಹುದು". ಅದಕ್ಕಾಗಿ ಮತ್ತೊಮ್ಮೆ ಭೃಗುಋಷಿಗಳ ಆಶ್ರಮಕ್ಕೆ ಬಂದ. ಋಷಿಗಳದು ಒಂದೇ ಉತ್ತರ "ಇಲ್ಲಿ ಕ್ಷತ್ರಿಯರಾರೂ ಇಲ್ಲ."

ಪ್ರತರ್ದನನು ಆದರೂ ಆಶ್ರಮದ ಒಳಗೆ ಹೊಕ್ಕು ಹುಡುಕಿದ. ಒಳಗೆ ಅಗ್ನ್ಯಗಾರದಲ್ಲಿ ಹೈಹಯನು ಹರಿನಾಮ ಹಚ್ಚಿಕೊಂಡು ಜಪಮಾಲೆ ತಿರುಗಿಸುತ್ತ ಕುಳಿತುಕೊಂಡಿದ್ದನು. ಕೂಡಲೇ ಪ್ರತರ್ದನನಿಗೆ ಅವನ ಗುರುತು ಹತ್ತಿ ಅವನನ್ನು ಎಳೆದು ಹೊರತಂದು ಭೃಗುಋಷಿಗಳ ಎದುರು ನಿಲ್ಲಿಸಿ "ಇವನು ಕ್ಷತ್ರಿಯನೋ ಬ್ರಾಹ್ಮಣನೋ" ಎಂದು ಕೇಳಿದ.

ಅದಕ್ಕೆ ಭೃಗುಋಷಿಗಳು "ಈಗಂತೂ ಅವನು ಬ್ರಾಹ್ಮಣನೇ ಸರಿ. ಅವನ ತ್ರಿದಂಡ ಧಾರಣ, ಜಪ ತಪ, ವೇದಾಧ್ಯಯನ, ಜಪಮಾಲೆಗಳನ್ನು ನೋಡಿದರೆ ಅವನು ಕ್ಷತ್ರಿಯನೆಂದು ಯಾರೂ ಹೇಳಲಾರರು. ಅವನೀಗ ನಿಜವಾಗಿಯೂ ತನ್ನ ಕ್ಷತ್ರಿಯತ್ವವನ್ನು ತೊರೆದಿದ್ದಾನೆ. ವಿಶ್ವಾಮಿತ್ರನಂತೆ ನಿರಂತರ ಜ್ಞಾನೋಪಾಸನೆ ಹಾಗೂ ಧ್ಯಾನ ತಪಸ್ಸು

ಗಳಿಂದ ಬ್ರಾಹ್ಮಣ್ಯವನ್ನು ಸಂಪಾದಿಸುವ ಪ್ರಯತ್ನದಲ್ಲಿದ್ದಾನೆ. ಅವನಲ್ಲಿ ಇನ್ನೂ ಪೂರ್ಣ ಬ್ರಾಹ್ಮಣತ್ವವು ಬಾರದಿದ್ದರೂ ಈಗ ಅವನು ಕ್ಷತ್ರಿಯನಂತೂ ಅಲ್ಲ. ಇದಕ್ಕಾಗಿಯೇ ನಾನು ನಿನಗೆ ಇಲ್ಲಿ ಕ್ಷತ್ರಿಯರಾರು ಇಲ್ಲವೆಂದು ಹೇಳಿದ್ದು" ಎಂದು ನುಡಿದರು.

ಅದನ್ನು ಕೇಳಿ ಪ್ರತರ್ದನನು ಹೈಹಯನನ್ನು ಬಿಟ್ಟುಬಿಟ್ಟ. ಅವನಿಗೆ ಹೇಳಿದ. "ಋಷಿಗಳ ಪುಣ್ಯದಿಂದ ಬದುಕು ಹೋಗು. ಬ್ರಾಹ್ಮಣರಿಗೆ ಮಾತ್ರವಲ್ಲದೇ ಬ್ರಾಹ್ಮಣ್ಯದೆಡೆಗೂ ಮಾನಮರ್ಯಾದೆ ಕೊಡುವುದು ನಮ್ಮಂಥ ಕ್ಷತ್ರಿಯರ ಪರಮಪವಿತ್ರ ಕರ್ತವ್ಯವಾಗಿದೆ. ನನ್ನ ಕರ್ತವ್ಯ ಮಾಡಿದ ಸಮಾಧಾನ ನನಗಿದೆ.

"ನೀನು ಬಿಲ್ಲುಬಿಟ್ಟು ಸಿಂಹಾಸನ, ಅರಮನೆ ತೊರೆದು ಅಡವಿ ಸೇರಿ ದುಕೂಲಧರಿಸಿ, ಗೆಡ್ಡೆಗೆಣಸು ಸೇವಿಸಿ, ಉಪವಾಸಮಾಡುತ್ತ ಜಪಮಾಲೆ ತಿರುಗಿಸುತ್ತ ಅಹೋರಾತ್ರಿ ಹುಲ್ಲಿನಗುಡಿಸಲಿನಲ್ಲಿ ಒದ್ದಾಡಿದ್ದುನೋಡಿ, ಕೇಳಿ ನಿನ್ನನ್ನು ಕೊಂದಷ್ಟೇ ತೃಪ್ತಿಯೆನಿಸಿದೆ" ಎಂದು ಹೇಳಿ ಹೊರಟುಹೋದ

ಇತ್ತ ಈ ಬಿರುನುಡಿಗಳನ್ನು ಆಲಿಸಿದ ಹೈಹಯನಿಗೆ ಈ ಮಾತುಗಳಿಂದ ಕೆಡುಕೆನಿಸಲಿಲ್ಲ. ಅವನಲ್ಲಿ ನಿಜವಾಗಿಯು ಸೇಡಿನ, ಸ್ಪರ್ಧೆಯ ಮನೋಭಾವ ಸಂಪೂರ್ಣವಾಗಿ ತೊಲಗಿತ್ತು. ಅವನ ಮನಸ್ಸು ಆಶ್ರಮದ ವಾತಾವರಣ ಪ್ರಭಾವದಿಂದ 'ಸ್ವಯಂ ಧರಿಸಿದ ಮುನಿವೃತ್ತಿಯಿಂದ' ಶಾಂತವಾಗಿದ್ದಿತು. ತನ್ನ ಹಿಂದಿನ ಕ್ಷತ್ರಿಯತ್ವದ ಬಗೆಗೆ, ಭೋಗಭಾಗ್ಯಗಳ ಬಗೆಗೆ ಅವನಲ್ಲಿ ಜುಗುಪ್ಸೆ ಹುಟ್ಟಿತ್ತು.

ಭೃಗುಋಷಿಗಳ ಸೇವೆಯಿಂದ, ಆಶೀರ್ವಾದ ಪಡೆದು ದೀರ್ಘಕಾಲ ಪರ್ಯಂತ — ಉಗ್ರವಾದ ತಪಸ್ಸನ್ನು ತಪ್ಪದೇ ಆಚರಿಸಿದ. ಈ ಅವಿರತ ಶ್ರಮದ ಫಲವಾಗಿ ಕೊನೆಗೆ ಬ್ರಾಹ್ಮಣತ್ವ ಸಂಪಾದಿಸಿಯೇ ಬಿಟ್ಟ. ಅಷ್ಟಕ್ಕೇ ತಪಸ್ಸನ್ನು ನಿಲ್ಲಿಸದೇ ಮುಂದು ವರಿಸಿ 'ಋಷಿ' ಎಂಬ ಪದವನ್ನೂ ಪಡೆದ. ಇಲ್ಲಿಗೂ ತೃಪ್ತನಾಗದೇ ತಪಸ್ಸನ್ನು ಇನ್ನೂ ತೀವ್ರಗೊಳಿಸಿ ಕೌಶಿಕನಂತೆ 'ಬ್ರಹ್ಮರ್ಷಿ' ಪದವಿಯನ್ನು ಹೊಂದಿದ.

ಋಷಿಯಾದ ಬಳಿಕ ಇವನಿಗೆ ಹುಟ್ಟಿದ ಓರ್ವಸುತನೂ 'ಬ್ರಹ್ಮರ್ಷಿ' ಎಂದು ಪ್ರಸಿದ್ಧನಾಗಿ 'ಗೃತ್ಸಮದ' ಎಂದು ವೇದಗಳಲ್ಲಿ ಮಹಿತನಾಗಿದ್ದಾನೆ. ಗೃತ್ಸಮದನು ಋಗ್ವೇದದ ಅನೇಕ ಸೂಕ್ತಗಳ ದ್ರಷ್ಟಾರನಾದ. ಮಂತ್ರದರ್ಶಿ ಮಹರ್ಷಿ ಯೆಂದು ವೈದಿಕ ಸಂಸ್ಕಾರದಲ್ಲಿ ಪ್ರಖ್ಯಾತನಾಗಿದ್ದಾನೆ.

---

(26ನೇ ಪುಟದಿಂದ)

ವಿಚಾರದಲ್ಲಿ "ಪೈಸಾ ದಿಯಾತೋ ಲೋಟಾ, ರುಪಯಾ ದಿಯಾತೋ ಗೋತಾ" ಅಂದರೆ ದುಡ್ಡುಕೊಟ್ಟಾಗ ತಂಬಿಗೆ ನೀರು ತಂದು ಮೇಲೆ ಸುರಿದುಕೊಳ್ಳಬಹುದು, ಅದೇ ಒಂದು ರೂಪಾಯಿಯನ್ನಿತ್ತಾಗ ಆ ಸರೋವರದಲ್ಲಿ ಮುಳುಗು ಹಾಕಬಹುದು" ಮೊಗಲರ ಕಾಲದಲ್ಲಿ ಈ ತರಹದ ಕರವಸೂಲಿಯನ್ನು ಯಾತ್ರಿಕರಿಂದ ಮಾಡಲಾಗುತ್ತಿತೆಂಬ ಬಗ್ಗೆ ತಮ್ಮ ಶಂಕೆಯನ್ನು ಅವರು ವ್ಯಕ್ತಪಡಿಸಿದ್ದಾರೆ.

ಕಾಲನಿಯಾಮಕನ ಕೈಯಲ್ಲಿ ಪರಿವರ್ತನೆಯ ಸೂತ್ರವಿದೆ, ಔರಂಗಜೇಬನ ಮರಣಾಂತರ ವಿಜಯಿಗಳಾದ ಮರಾಠರ ಕುದುರೆಗಳು ಭಾರತದ ತುಂಬೆಲ್ಲ ಹೆಮ್ಮೆಯಿಂದ ಓಡಾಡ ತೊಡಗಿದವು, "ತಮ್ಮ ರಾಜಕಾರಣಕ್ಕೆ ಮರಾಠರು ಎಷ್ಟೊಂದು ಮಹತ್ವವನ್ನೀಯುತ್ತಿದ್ದರೋ ಅಷ್ಟೇ ಹಿಂದೂ ಧರ್ಮದ ಪುನರುಜ್ಜೀವನಕ್ಕಾಗಿಯೂ ಅವರು ಹೋರಾಡುತ್ತಿದ್ದರು. ಪಂತ ಪ್ರಧಾನರಾದ ಪೇಶ್ವೆ ನಾನಾಸಾಹೆಬ "ಹಿಂದು ವೇಳೆ ದಿಲ್ಲಿಯನ್ನು ಸ್ವಾಧೀನಪಡಿಸಿಕೊಳ್ಳಲು ತಡವಾದರೂ ಚಿಂತೆಯಿಲ್ಲ, ಮೊದಲು ಕಾಶಿ, ಪ್ರಯಾಗ, ಗಯಾ. ಅಯೋಧ್ಯಾ, ಮಥುರಾ, ಕುರುಕ್ಷೇತ್ರ ಮೊದಲಾದ ಪವಿತ್ರ ಸ್ಥಳಗಳು ನಮ್ಮ ಕೈವಶವಾಗುವಂತೆ ನೋಡಿಕೊಳ್ಳಿರಿ" ಎಂದು ತನ್ನ ಸರದಾರರಿಗೆ ಕಟ್ಟಪ್ಪಣೆ ಮಾಡಿದ್ದನೆಂಬ ವಿಚಾರವು ಅಭ್ಯಾಸದಿಂದ ತಿಳಿದುಬರುತ್ತದು, ಈ ಮಾತಿಗೆ ಸಾಕ್ಷಿಯಾಗಿ ಕ್ರಿ. ಶ 1752 ರ ಸುಮಾರಿನಲ್ಲಿ ಅಬ್ದಾಲಿಯ ಆಕ್ರಮಣವನ್ನೆದುರಿಸುವ ವಿಚಾರವನ್ನು ಮರಾಠರು ತಮ್ಮ ಕೈಗೆತ್ತಿಕೊಂಡಾಗ ಮೊದಲು ಅವರು ದಿಲ್ಲೀಶ್ವರನಿಂದ ಹರಿಯಾಣದ ಭಾಗವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ಸರ್‌ದಾರ್ ಹಿಂಗಣೆ ಎಂಬುವವರಿಗೆ ಈ ಕೆಲಸವನ್ನೊಪ್ಪಿಸಲಾಗಿತ್ತು. ಆ ಭಾಗದಲ್ಲಿ ಸಂಪೂರ್ಣ ಮರಾಠರ ಆಧಿಕಾರವು ಸ್ಥಾಪಿತವಾಯಿತು, 1784 ರಿಂದ 1803ರ ವರೆಗೆ ಕುರುಕ್ಷೇತ್ರದ ಪರಿಸರಗಳ ಮೇಲೆ ಮರಾಠರು ಸಂಪೂರ್ಣ ತಮ್ಮ ಅಧಿಕಾರವನ್ನು ನಡೆಸಿದರು.

ಈ ಕಾಲಾವಧಿಯಯಲ್ಲಿ ಮಹಾಸಾಧ್ವಿ ಶಿರೋಮಣಿಯಾದ ಅಹಲ್ಯಾಬಾಯಿ ಹೊಳಕರ ಕುರುಕ್ಷೇತ್ರದಲ್ಲಿರುವ ಸ್ಥಾನೇಶ್ವರ ದೇವಾಲಯಗಳ ಜೀರ್ಣೋದ್ಧಾರ ಕಾರ್ಯವನ್ನು ಕೈಗೆತ್ತಿಕೊಂಡಳು. ದೇವಮಂದಿರಗಳು ಪುನಃ ತಲೆಯೆತ್ತಿ ನಿಲ್ಲುವಂತಾದವು. ಅವಳ ಪುಣ್ಯವಿಶೇಷದಿಂದ ಕುರುಕ್ಷೇತ್ರದ ನೆಲವು ಮತ್ತೆ ಎಂದಿನಂತೆ ಭಕ್ತರನ್ನಾಕರ್ಷಿಸತೊಡಗಿತು, ಈಗಂತೂ ಬ್ರಹ್ಮಸರೋವರದ ಪರಿಸರದ ವೈಭವವು ಅತ್ಯುನ್ನತ ಮಟ್ಟವನ್ನೇ ತಲುಪಿದಂತಾಗಿದೆ. ಯಮುನಾ ನದಿಯ ನೀರಿನ ಆಸರೆಯಿಂದಾಗಿ ಮುಗಿಲೆತ್ತರದ ವೃಕ್ಷಗಳು ಕಾಣಬರುತ್ತಿವೆ, ಸುಂದರ ವನಗಳು ಭಕ್ತರ ಮನವನ್ನಾಕರ್ಷಿಸುತ್ತಿವೆ. ಗತಕಾಲದ ಇತಿಹಾಸವನ್ನಭ್ಯಾಸ ಮಾಡುವರಿಗೆ ಅಲ್ಲಿಯ ವಾತಾವರಣದಿಂದಾಗಿ ಹೊಸ ಸ್ಫೂರ್ತಿ ಲಭಿಸುವಂತಾಗಿದೆ. ಸಾವಿರಾರು ವರುಷಗಳಿಂದ ಜನಮನದಲ್ಲಿ ಸ್ಥಾನಗಳಿಸಿದ ಬ್ರಹ್ಮಸರೋವರವು ಇತಿಹಾಸದೊಂದಿಗೆ ನಡೆಸಿದ ಈ ಹೋರಾಟದ ಕಥೆಯೊಂದಿಗೆ ಇಂದಿನ ಸುಂದರ ವಾತಾವರಣವನ್ನು ಹೋಲಿಸಿ ನೋಡಿದಾಗ ಹಿಂದೂ ಸಂಸ್ಕೃತಿಯ ಶಕ್ತಿ ಎಂಥ ಅಗಾಧವಾದುದೆಂಬುದರ ಅರಿವಾಗುತ್ತದೆ.

★

# ಐತಿಹಾಸಿಕ ಮೈಸೂರು ದಸರಾ

ಶ್ರೀ ಸಿ. ಗೋವಿಂದಾಚಾರ್

ಮಹಿಷನ ಊರು ಮೈಸೂರು, ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ, ಒಂದು ಐತಿಹಾಸಿಕ, ಸುಂದರ ಹಾಗೂ ಹೆಮ್ಮೆಯ ನಗರ. ಮೈಸೂರು ಮತ್ತು ದಸರಾ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಉತ್ಸಾಹಭರಿತ ಮೈಸೂರು ಜನರಿಗೆ ಈ ದಸರಾ ಬಹು ಸಂಭ್ರಮದ ಹಾಗೂ ಸಡಗರದ ಹಬ್ಬವಾಗಿದೆ. ಸಾಂಸ್ಕೃತಿಕ ದೃಷ್ಟಿಯಿಂದ ಮೈಸೂರು ವಿಜಯನಗರದ ಉತ್ತರಾಧಿಕಾರಿಯಾಯಿತು. ವಿಜಯನಗರದ ಸಾಮ್ರಾಜ್ಯದಿಂದ ಉಡುಗೊರೆಯಾಗಿ ಬಂದ ಈ ದಸರೆಯು ಮೈಸೂರು ಅರಸರಿಗೆ ಶಾಸ್ತ್ರೋಕ್ತವಾದ ಹಾಗೂ ಸಾಂಸ್ಕೃತಿಕ ಚಟುವಟಿಕೆಯಾಗಿತ್ತು. ದಸರಾ ಆಚರಣೆ ಪ್ರಾಚೀನವಾಗಿದ್ದರೂ, ಮೈಸೂರಿನಲ್ಲಿ ಆರಂಭವಾಗಿದ್ದು ರಾಜಒಡೆಯರ ಕಾಲದಲ್ಲಿ (ಕ್ರಿ. ಶ. 1799) ಪ್ರಥಮ ದಸರ ಆಚರಣೆ ಮಾಡಿದವರು ದಿವಾನ್ ಪೂರ್ಣಯ್ಯನವರ ನೇತೃತ್ವದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು. ಪ್ರಜೆಗಳೆಲ್ಲರೂ ದಸರೆಯೆಂಬ ಸಿಹಿಯನ್ನು ಸವಿಯಬೇಕೆಂಬ ಆಸೆಯಿಂದ ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು ಇದನ್ನು ಹೆಚ್ಚು ಆಕರ್ಷಣೀಯವಾಗಿ ಮಾಡಿ ವಿಖ್ಯಾತಗೊಳಿಸಿದರು. ಜಯಚಾಮರಾಜ ಒಡೆಯರ ಕಾಲದಲ್ಲಿ ಅಂತ್ಯವಾಯಿತು. ಕರ್ನಾಟಕದಿಂದ ಇಡೀ ಭಾರತಕ್ಕೆ ವ್ಯಾಪಕವಾಗಿರುವ ಈ ಹಬ್ಬವನ್ನು ಪಶ್ಚಿಮ ಬಂಗಾಳ, ರಾಜಾಸ್ಥಾನ, ಮಹಾರಾಷ್ಟ್ರ, ದೆಹಲಿ ಇತ್ಯಾದಿಯಾಗಿ ದೇಶಾದ್ಯಂತ ಆಚರಿಸಲಾಗುತ್ತಿದೆ. ಮೈಸೂರಿನ ಸಾಂಸ್ಕೃತಿಕ ಪರಂಪರೆಯನ್ನು ಎತ್ತಿ ತೋರಿಸುವ ಒಂದು ಕನ್ನಡಿ ಈ ದಸರ. ಇದಕ್ಕೆ ಸಾಟಿಯಾದ ಬೇರೊಂದು ನಾಡಹಬ್ಬ ಇಲ್ಲ. ಈ ಆಧುನಿಕ ಹಾಗೂ ಪ್ರಜಾಪ್ರಭುತ್ವಯುಗದಲ್ಲಿ ಮಹಾರಾಜ, ಸಿಂಹಾಸನ, ದರ್ಬಾರ್ ಇತ್ಯಾದಿಗಳು ಆಕ್ಷೇಪಣೀಯವಾಗಿದ್ದರೂ ಶಾಸ್ತ್ರೋಕ್ತ ರೀತಿಯಲ್ಲಿ ದಸರೆಯು ಅನೇಕ ದಶಕಗಳಿಂದ ನಡೆದುಬಂದಿದೆ. ಇದಕ್ಕೆ ಕಾರಣ ಅರಸರ ಬಗ್ಗೆ ಜನರಿಗಿರುವ ಗೌರವ ಮತ್ತು ಅಭಿಮಾನ. ಉದಾ : 1956 ರಲ್ಲಿ 'ಇದೇ ಕೊನೆಯ ದಸರಾ' ಎಂಬ ವದಂತಿಯಿಂದ ಸರಾಸರಿಗಿಂತ ಹತ್ತುಪಟ್ಟು ಹೆಚ್ಚು ಸಂಖ್ಯೆಯಲ್ಲಿ ಜನರು ಸೇರಿದ್ದರು. ಮೈಸೂರು ಚರಿತ್ರೆಯಲ್ಲೇ ದಸರಾಗೆ ಇಷ್ಟೊಂದು ಜನ ಸೇರಿರಲಿಲ್ಲ. ಜನರಿಗೆ, ಅರಮನೆ ಒಂದು ಕೇಂದ್ರಸ್ಥಾನ. ಶ್ರಾವಣಮಾಸದಲ್ಲಿ ಹತ್ತು ದಿನಗಳು ಕೃಷ್ಣೋತ್ಸವ, ಅಂಧಕಾಸುರ ಸಂಹಾರ (ದೆಹಲಿಯ ರಾಮಲೀಲ ಮೈದಾನದಲ್ಲಿ ನಡೆಯುವ ರಾವಣ ಸಂಹಾರದ ರೀತಿಯಲ್ಲಿ) ಮತ್ತು ದಸರಾ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಸ್ಥಳೀಯಜನರು ಇರುತ್ತಿದ್ದರು. ದಸರಾ ಬಂದರೆ, ಎಲ್ಲರಿಗೂ ಸಡಗರ. ಹೋಟೇಲ್, ವಸತಿಗೃಹಗಳಿಗೆ ಹಾಗೂ ಸಿನಿಮಾಮಂದಿರಗಳಿಗೆ ಒಳ್ಳೆಯ ಲಾಭದಾಯಕ ವ್ಯಾಪಾರ. ಪ್ರಮುಖ ಕಟ್ಟಡಗಳಿಗೆ ಸುಣ್ಣಬಣ್ಣ, ರಸ್ತೆ ಬೀದಿಗಳನ್ನು ಸ್ವಚ್ಛಗೊಳಿಸುವುದು, ವಸ್ತುಪ್ರದರ್ಶನ, ಅನೇಕ ಚೌಕಗಳಲ್ಲಿ ತಮಾಷೆ ಕಾರ್ಯಕ್ರಮಗಳು ಬಿಡುವಿಲ್ಲದೆ ಸಾಗುತ್ತಿದ್ದವು. ಎಲ್ಲಾ ಶಾಲೆಗಳಿಗೂ ಮತ್ತು ವಿದ್ಯಾಸಂಸ್ಥೆಗಳಿಗೂ ಹತ್ತು ದಿನ ರಜ ಘೋಷಿಸಲಾಗುತ್ತಿತ್ತು

ದಸರಾ ಎಂಬ ಪದವು 'ದಶಹರಾ' ಎಂಬ ಪದದಿಂದ ಬಂದಿದೆ. ದಶಶಿರ ದೈತ್ಯನಾದ ರಾವಣನಿಗೆ ಇದು ಅನ್ವಯಿಸುವುದು. ಹತ್ತು ದಿನಗಳು ಅಥವಾ ನವರಾತ್ರಿ ಎಂದು ಅರ್ಥ. ಈ ನವರಾತ್ರಿಯಲ್ಲಿ ಮೊದಲನೆಯ ಮೂರು ದಿವಸಗಳು ಲಕ್ಷ್ಮಿಯನ್ನು ಎರಡನೇ ಮೂರು ದಿವಸಗಳನ್ನು ಸರಸ್ವತಿಯನ್ನು ಮತ್ತು ಮೂರನೆ ಮೂರು ದಿವಸಗಳು ದುರ್ಗೆಯನ್ನು ಪೂಜಿಸುವುದು ವಾಡಿಕೆಯಲ್ಲಿದೆ. ನವದುರ್ಗೆ ಮತ್ತು ಚಾಮುಂಡೇಶ್ವರಿ ದಸರೆಯ ಮುಖ್ಯದೇವತೆಗಳು. ಇಲ್ಲಿ ಬರುವ ಅಷ್ಟಮಿಯೇ ದುರ್ಗಾಷ್ಟಮಿ. (ಕಲ್ಕತ್ತೆಯಲ್ಲಿ ಬಹಳ ವಿಜೃಂಭಣೆ). ಸರಸ್ವತೀ ಪೂಜೆಯನ್ನು ನಾಲ್ಕನೇ ದಿನವೂ ಮತ್ತು ಹಯಗ್ರೀವ ಪೂಜೆಯನ್ನು ಒಂಬತ್ತನೇ ದಿನ ಆಚರಿಸಲಾಗುವುದು. ಕೆಲವು ಸಂವತ್ಸರದಲ್ಲಿ ದಶರಾತ್ರಿ ಸಂಭವಿಸುತ್ತಿತ್ತು. ಎಲ್ಲಾ ಜಾತಿಯವರೂ ಈ ಹಬ್ಬವನ್ನು ಆಚರಿಸುವರು. ಇಲ್ಲಿ ಬರುವ ಮಹಾಲಯ ಅಮಾವಾಸ್ಯೆ ಪಿತೃಪಕ್ಷ ಎಂಬ ಒಂದು ಪುಣ್ಯಕರ್ಮವನ್ನು ಎಲ್ಲಾ ಹಿಂದುಗಳೂ ಮಾಡುವರು. ದಿವ್ಯಕ್ಷೇತ್ರಗಳಲ್ಲಿ ವಿಶೇಷ ಪೂಜೆ ಉತ್ಸವಗಳು ಜರುಗುವುವು. ಉದಾ : ತಿರುಪತಿಯಲ್ಲಿ ನವರಾತ್ರಿ ಬ್ರಹ್ಮೋತ್ಸವ, ವೆಂಕಟೇಶ ಜಯಂತಿ, ದೇಶಿಕರ ತಿರುನಕ್ಷತ್ರ ಮತ್ತು ಶೃಂಗೇರಿಯಲ್ಲಿ ಶರನ್ನವರಾತ್ರಿ. ಪುಟ್ಟಮಕ್ಕಳಿಗೆ ಬಹಳ ಸಂಭ್ರಮ—ಮನೆ ಮನೆಗಳಲ್ಲಿ ಬೊಂಬೆಗಳನ್ನು ಇಡುವುದು ಮತ್ತೊಂದು ಸಂಪ್ರದಾಯ.

## ಪಾಡ್ಯ-ದಶಮಿ :

ಮೈಸೂರು ಅರಸರ ಕುಲದೇವತೆ ಶ್ರೀ ಚಾಮುಂಡೇಶ್ವರಿ: ಈ ಹತ್ತುದಿನಗಳಲ್ಲಿ ಪ್ರತಿದಿನ ಬೆಳಗ್ಗೆ ಅರಮನೆಯ ಕನ್ನಡಿ ತೊಟ್ಟಿಯಲ್ಲಿ ಚಾಮುಂಡೇಶ್ವರಿ ಉತ್ಸವಮೂರ್ತಿಗೆ ಘನ ಕುಂಕುಮಾರ್ಚನೆ ಮತ್ತು ವಿಶೇಷ ಪೂಜೆ ನೆರವೇರುವುದು. ಸಂಗೀತ ನೃತ್ಯ ಕಾರ್ಯಕ್ರಮವೂ ಇರುವುವು. ರಾಜಗುರುಗಳಾದ ಬ್ರಹ್ಮತಂತ್ರ ಪರಕಾಲ ಯತಿವರ್ಯರಿಂದ ಆಶೀರ್ವಾದ ಮತ್ತು ಫಲಮಂತ್ರಾಕ್ಷತೆಗಳನ್ನು ಪಡೆದು, ಪಾಡ್ಯದಂದು ಬೆಳಗ್ಗೆ ಶುಭಮುಹೂರ್ತದಲ್ಲಿ ಇಪ್ಪತ್ತೊಂದು ಕುಶಾಲ ತೋಪುಗಳ ಉಡಾವಣೆಯೊಂದಿಗೆ ಮಹಾರಾಜರು ಸಿಂಹಾಸನಾರೋಹಣ ಮಾಡುವರು. 6 ಸಾವಿರ ತೊಲ ಚಿನ್ನದ ಹೊದ್ದಿಕೆಯಿರುವ ರತ್ನ ಖಚಿತವಾದ ಈ ಸಿಂಹಾಸನದಲ್ಲಿ ಇಬ್ಬರು ಕೂರಬಹುದು. ಮಹಾರಾಜರು ಪೀತಾಂಬರಧಾರಿಯಾಗಿ ಪೂಜಾಗೃಹದಿಂದ ದರ್ಬಾರ್ ಸಭಾಂಗಣಕ್ಕೆ ಪರಿವಾರ ಸಮೇತ ಪಂಜು, ದೀವಟಿಗೆ, ನಡೆಮುಡಿ ಇತ್ಯಾದಿಯಾಗಿ ಸಕಲ ಮರ್ಯಾದೆಗಳೊಂದಿಗೆ ಗಂಭೀರ ನಡಿಗೆಯಿಂದ ಬಂದು ಸಿಂಹಾಸನವನ್ನು ಮೂರು ಬಾರಿ ಪ್ರದಕ್ಷಿಣೆಮಾಡಿ, ಆರತಿಯನ್ನು ಬೆಳಗಿ, ನಮಸ್ಕಾರ ಮಾಡಿ ಬುಧಸ್ತೋಮದ ವೇದಘೋಷದೊಂದಿಗೆ ಸಿಂಹಾಸನಾರೋಹಣ ಮಾಡುವರು. ಅರಮನೆ ಇಂಗ್ಲೀಷ್ ಬ್ಯಾಂಡ್ ವಾದ್ಯದವರು-

ಕಾಯೌ ಶ್ರೀಗೌರಿ  
ಕರುಣಾಲಹರಿ ತೋಯಜಾಕ್ಷಿ ಶಂಕರೀಶ್ವರಿ  
ಶ್ರೀಜಯಚಾಮುಂಡಿಕೆ,  
ಶ್ರೀಜಯಚಾಮೇಂದ್ರ  
ನಾಮಾಂಕಿತ ಭೂಮೀಂದ್ರ  
ಲಲಾಮನ ಮುದದೆ

ಎಂಬ ರಾಜ್ಯಗೀತೆಯನ್ನು ನುಡಿಸುವರು. ದರ್ಬಾರ್ ಸಭಾಂಗಣದ ಮುಂಭಾಗದ ಎರಡೂ ಕಡೆಗಳಲ್ಲಿ ಪಂಚರಂಗಿನ ನಿಶಾನೆಯನ್ನು ಚಕ್ರದಂತೆ ತಿರುಗಿಸುವರು. ಶ್ರೇಷ್ಠ ಮರ್ಯಾದೆಗಳಲ್ಲಿ ಇದೂ ಒಂದು. ಮಹಾರಾಜರು ವಂದನೆ (ಸೆಲ್ಯೂಟ್) ಮಾಡಿ ಕುಳಿತುಕೊಳ್ಳುವರು. ಸಿಂಹಾಸನದ ಛತ್ರಿಯನ್ನು ಅರ್ಘಕ್ಕೆಳಿಸಲಾಗುವುದು. ನಾಲ್ಕುಜನ ಹೊಗಳು ಭಟ್ಟರು 'ಪರಾಕು' ಹೇಳುವರು. ಪೋಲೀಸ್ ರಿಜರ್ವ್ ಪಡೆಗಳಿಂದ ಆಕಾಶದ ಕಡೆಗೆ ಮೂರು ಬಾರಿ ಗುಂಡಿನ ಸುರಿಮಳೆಯಾಗುವುದು. ರಾಜ್ಯಗೀತೆಯನ್ನು ಪುನಃ ಹಾಡಲಾಗುವುದು. ನಂತರ ವಿವಿಧ ಸೇನಾಪಡೆಗಳಿಂದ ಕವಾಯಿತು ಜರುಗುವುದು. ಮಹಾರಾಣಿಯವರು ಘೋಷಾವಸ್ಥೆಯಲ್ಲಿ ನಜರ್ (ಮುಜರೆ) ಒಪ್ಪಿಸಿದ

ಮೇಲೆ ರಾಷ್ಟ್ರಗೀತೆಯೊಂದಿಗೆ ಮಹಾರಾಜರು ಸಿಂಹಾಸನವನ್ನಿಳಿದು ಸ್ವಗೃಹಕ್ಕೆ ತೆರಳುವರು.

ಪ್ರತಿದಿನ ಸಂಜೆಯ ಕಾರ್ಯಕ್ರಮ ಈ ಕೆಳ ಕಂಡಂತೆ ಇತ್ತು.

(1) ಏಳು ಘಂಟೆಗೆ 'ಭುಗ್' ಎಂಬಂತೆ ದೀಪಾಲಂಕಾರಸಮೇತ ರಾಜರ ಸಿಂಹಾಸನಾರೋಹಣ. ಇದನ್ನು ನೋಡಿ "ಭೂಮಿಗಿಳಿದ ಸ್ವರ್ಗವೇ!" ಎಂದು ವಿದೇಶೀಯರು ಬೆರಗಾಗುತ್ತಿದ್ದರು. ಬಣ್ಣದ ಬಾವುಟ ತಿರುಗಿಸುವುದು, ಚಾಮರ ಬೀಸುವುದು, ಪರಾಕು ಹೇಳುವುದು, ಬ್ಯಾಂಡ್ ವಾದ್ಯದಿಂದ 'ಕಾಯೌ ಶ್ರೀಗೌರಿ'– ಎಲ್ಲವೂ ಏಕಕಾಲದಲ್ಲಿ.

(2) ಅರಮನೆಯ ಒಳಾಂಗಣವು ಅಲ್ಲಲ್ಲಿ ನೀರಿನ ಚಿಲುಮೆ, ಸಿಮೆಂಟ್ ಮತ್ತು ಹುಲ್ಲಿನ ಮೈದಾನಗಳಿಂದ ಕೂಡಿದೆ. ವಿಶೇಷವಾಗಿ ನಿರ್ಮಿತವಾದ ಅಖಾಡಾದಲ್ಲಿ ಕುಸ್ತಿಪಂದ್ಯಾವಳಿಯಾಗುವುದು. ಅದರ ಪಕ್ಕದಲ್ಲಿ ಯಂತ್ರಚಾಲಿತವಾದ ವೇದಿಕೆಯಲ್ಲಿ ಸಂಗೀತ ಕಛೇರಿಯಾಗುವುದು. ವಿದ್ವಾಂಸರು ಆಸೀನರಾದ ಈ ವೇದಿಕೆಯು 'ಲಿಫ್ಟ್' ಮೂಲಕ ಮೇಲಕ್ಕೆ ಸಭಾಂಗಣದ ಸಮಕ್ಕೆ ಮತ್ತು ದೊರೆಗಳಿಗೆ ಗೋಚರವಾಗುವಂತೆ ಬರುವುದು. ಇಪ್ಪತ್ತು ನಿಮಿಷಗಳ ನಂತರ 'ಲಿಫ್ಟ್' ಕೆಳಗಿಳಿಯುವುದು. ಪ್ರಾಚೀನ ಕಾಲದಿಂದಲೂ ಮೈಸೂರು ಅರಸರು ವಿದ್ಯೆ ಮತ್ತು ಕಲೆಗೆ ಅಮಿತವಾದ ಪ್ರೋತ್ಸಾಹವನ್ನು ಕೊಡುತ್ತಿದ್ದರು. ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು ಬಹು ಸಂಗೀತ ಪ್ರಿಯರು. ಇವರು 'ವೋೀರಿ' ಎಂಬ ವಾದ್ಯವನ್ನು ನುಡಿಸುತ್ತಿದ್ದರು. ಭಾರತದ ಹಲವಾರು ಕಡೆಗಳಿಂದ ಕಲಾವಿದರು ಮೈಸೂರಿಗೆ ಬಂದು ದೊರೆಗಳ ಮುಂದೆ ತಮ್ಮ ಪ್ರೌಢಿಮೆಯನ್ನು ಪ್ರದರ್ಶಿಸಿ ಉತ್ತೇಜನ, ಮೆಚ್ಚಿಗೆ ಹಾಗೂ ಅಮೂಲ್ಯವಾದ ಬಹುಮಾನವನ್ನು ಪಡೆಯುತ್ತಿದ್ದರು. ಉದಾ: ಟೈಗರ್ ವರದಾಚಾರ್ಯರು, ವೀಣೆ ಶೇಷಣ್ಣ, ಸುಬ್ಬಣ್ಣ, ಭಕ್ಷಿ ಸುಬ್ಬಣ್ಣ, ವೀಣೆ ವೆಂಕಟಗಿರಿಯಪ್ಪ, ಪಿಟೀಲು ಚೌಡಯ್ಯ, ಬಿಡಾರಂ ಕೃಷ್ಣಪ್ಪ, ದೇವೇಂದ್ರಪ್ಪ–ಇತ್ಯಾದಿ. ವಿಶ್ವವಿಖ್ಯಾತ ಚಿತ್ರಕಲಾನಿಪುಣ ರಾಜಾರವಿವರ್ಮ ಮತ್ತು ಇವರ ಸಹೋದರ ರಾಮವರ್ಮ ಸಹ ನಾಲ್ವಡಿಯವರ ಕಾಲದಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸಿದ್ದಾರೆ. ಇವರ ಅನೇಕ ಚಿತ್ರಕೃತಿಗಳು ಈಗಲೂ ಇವೆ.

(3) ಅರಮನೆಗೆ ಒಟ್ಟು ಆರು ದ್ವಾರಗಳಿವೆ. ಪೂರ್ವಕ್ಕಿರುವುದೇ ಮಹಾದ್ವಾರ–ಜಯಮಾರ್ತಾಂಡ. ಇದರ ಸಮೀಪದಲ್ಲಿ ಸೋಮೇಶ್ವರ ದೇವಾಲಯವಿದೆ. ಇಲ್ಲಿ ಶಮೀವೃಕ್ಷವೂ ಇದೆ. ಇಲ್ಲಿಂದ ವಿಶೇಷ ಮದ್ದಳೆ, ತಮಟೆ, ಕರ್ನಾಟಕ ಸಂಗೀತ ವಾದ್ಯಗೋಷ್ಠಿ, ಅಲಂಕಾರಕುದುರೆಗಳು ಮತ್ತು ಸೈನ್ಯ ಸಮೇತ ರಾಜಾಶ್ವ ಮತ್ತು ಪಟ್ಟದಾನೆ ಮೆರವಣಿಗೆ ಹೊರಟು ಸುಮಾರು ಏಳೂನಲವತ್ತಕ್ಕೆ ದರ್ಬಾರ್ ಸಭಾಂಗಣದ ಮುಂದೆ ಬರುವುದು. ರಾಜಾಶ್ವವು ಕತ್ತನ್ನು ಬಗ್ಗಿಸಿ ನಮಸ್ಕಾರ ಮಾಡುವುದು. ಪಟ್ಟದಾನೆಯು ಸೊಂಡಿಲಿನಿಂದ ಒಂದು ಬೊಗಸೆ ಹೂವನ್ನು ತೆಗೆದುಕೊಂಡು ಮಹಾರಾಜರಿಗೆ ಎರಚುವುದು. ಗೌರವ ಸೂಚಕವಾಗಿ ಎಲ್ಲರೂ ಎದ್ದು ನಿಲ್ಲುವರು. ಮಹಾರಾಜರು ಕುಳಿತಲ್ಲೇ ನಮಸ್ಕಾರ ಮಾಡುವರು. ಅವರು ಹಾಗೆ ಮಾಡುವಾಗ ಅವರ ಎಂಟು ಬೆರಳುಗಳಿಗೆ ಹಾಕಿಕೊಂಡಿರುವ ನವರತ್ನಖಚಿತ ಉಂಗುರಗಳು ಫಳಫಳನೆ ಹೊಳೆಯುವುದು.

ದರ್ಬಾರ್ ಸಭಾಂಗಣವು ಬಹಳ ವಿಸ್ತಾರವಾಗಿದೆ. ಎರಡೂ ಕಡೆಗಳು ಸೇರಿ ಸುಮಾರು ಒಂದು ಸಾವಿರ ಜನರು ಕುಳಿತುಕೊಳ್ಳಬಹುದು. ಪ್ರಜೆಗಳು ವಿಶೇಷ ಪೋಷಾಕಿನೊಂದಿಗೆ (ಬಿಳೀ ಶರಾಯಿ, ಕರಿಯ ಉದ್ದನೆಕೋಟು, ಮಡಿಕೆಯ ಉತ್ತರೀಯ ಮತ್ತು ಬಿಳೀ ಪೇಟ) ಇಪ್ಪತ್ತು ನಿಮಿಷಗಳ ಮುಂಚೆಯೇ ಬಂದು ಆಸೀನರಾಗಬೇಕು. ಅರಸು ಕುಟುಂಬದವರಿಗೆ ಅವರವರ ಸ್ಥಾನಕ್ಕೆ ತಕ್ಕಂತೆ ವಿವಿಧ ಬಣ್ಣಗಳ ಉಡುಪುಗಳು ಇರುತ್ತವೆ. ಭಾಗವತರು ಶಾಸ್ತ್ರಿಗಳು ಮತ್ತು ವೇದವಿದ್ವಾಂಸರುಗಳು ಕಚ್ಚೆ, ಶಾಲು ಮತ್ತು ಪೇಟ ಒಳಗೊಂಡ ಉಡುಪಿನಲ್ಲಿ ಬರಬೇಕು. ಪರಿವಾರದಲ್ಲಿ 7½ ಅಡಿಗಳು ಉದ್ದವಿರುವ ಇಬ್ಬರು ವ್ಯಕ್ತಿಗಳು ಎಲ್ಲರ ಗಮನವನ್ನೂ ಸೆಳೆಯುತ್ತಿದ್ದರು. ವಿದೇಶಿಯರು ಪೂರ್ತ 'ಸೂಟ್'ನಲ್ಲಿ' ಬರಬೇಕು.

(4) ಮಹಾರಾಜರು ಸಿಂಹಾಸನದಿಂದ ನಿವೃತ್ತಿಯಾಗುವುದಕ್ಕೆ 15 ನಿಮಿಷಗಳ ಮುಂಚೆ 'ಪ್ರಜೆಗಳು' ಮರ್ಯಾದೆ ಮತ್ತು ಮುಜರೆಯನ್ನು ಒಪ್ಪಿಸಬಹುದು. ಸಭೆಯ ಪ್ರತಿಯೊಂದು ಸಾಲಿನಲ್ಲಿ ಕುಳಿತಿರುವವರು ಕ್ರಮವಾಗಿ ಎದ್ದುನಿಂತು ನಮಸ್ಕಾರ ಮಾಡಬೇಕು. ಮುಜರೆಗಾಗಿ ಸಾಲಾಗಿ ನಿಲ್ಲಬೇಕು. ಪುಷ್ಪ ಅಥವ ಬೆಳ್ಳಿ ನಾಣ್ಯಗಳನ್ನು ತಟ್ಟೆಯಲ್ಲಿಟ್ಟುಕೊಂಡು ಮಹಾರಾಜರ ಮುಂದೆ ನಿಂತು ನಮಸ್ಕಾರ ಮಾಡಬೇಕು. ರಾಜರು ಇದನ್ನು ಮುಟ್ಟುವರು. ಸರಸ್ವತಿ ಪೂಜೆ ಮತ್ತು ದುರ್ಗಾಷ್ಟಮಿ ಕಾರ್ಯಕ್ರಮಗಳು ಸ್ವಗೃಹದಲ್ಲೇ ನಡೆಯುವುದು. ಇವುಗಳಲ್ಲಿ ಸಾರ್ವಜನಿಕರಿಗೆ ಪ್ರವೇಶವಿಲ್ಲ.

(5) ಒಂಭತ್ತನೇ ದಿನ ಆಯುಧಪೂಜೆ. ವಿಶೇಷವಾಗಿ ನಿರ್ಮಾಣವಾದ ವೇದಿಕೆಯಲ್ಲಿ ಮಹಾರಾಜರು ನಿಂತುಕೊಂಡು ಪಟ್ಟದಾನೆ, ರಾಜಾಶ್ವ, ಪಟ್ಟದ ಕತ್ತಿ, ರಥ ಮತ್ತು ಖಾಸಾ ಮೋಟರ್ ಕಾರುಗಳಿಗೆ ಪರಿಮಳ ಗಂಧಾಕ್ಷತೆ ಮತ್ತು ಪುಷ್ಪಗಳಿಂದ ಪೂಜಿಸುವರು. ಈ ಕಾರ್ಯಕ್ರಮದ ಅವಧಿ 45 ನಿಮಿಷಗಳು. ಛಳಿ, ಮಳೆ ಬಿಸಿಲು ಲಕ್ಷ್ಯವಿಲ್ಲ ಮೈಸೂರು ಜನರಿಗೆ.

(6) 10 ನೇ ದಿನ ಬೆಳಿಗ್ಗೆ 20 ನಿಮಿಷಗಳ ಕಾರ್ಯಕ್ರಮ. ದೇವರು, ಪಟ್ಟದಾನೆ, ರಾಜಾಶ್ವ, ಪಟ್ಟದ ಕತ್ತಿ ಇತ್ಯಾದಿಗಳನ್ನು ಮಹಾರಾಜರು ಸೈನ್ಯ ಸಮೇತ ಬನ್ನಿ ಮಂಟಪಕ್ಕೆ (ಸುಮಾರು 5 ಕಿ. ಮಿ. ದೂರವಿದೆ) ಕಳುಹಿಸಿಕೊಡುವುದು ಮತ್ತು ಅರಮನೆ ಒಳಾಂಗಣದಲ್ಲಿ ಮಹಾರಾಜರಿಂದ ಸ್ವಲ್ಪದೂರ ಕುದುರೆ ಸವಾರಿಯಾಗುವುದು. ಹಿಂದೆ ಈ ರೀತಿಯ ಕುದುರೆ ಸವಾರಿ ವರ್ಧಂತಿಯಂದು ನಡೆಯುತ್ತಿತ್ತು. ಕ್ರಮೇಣ ಬೆಳ್ಳಿರಥಕ್ಕೆ ಬದಲಾಯಿಸಿತು. ನಂತರ ಎರಡೂ ಕಾರ್ಯಕ್ರಮಗಳನ್ನು ನಿಲ್ಲಿಸಲಾಯಿತು.

## ವಿಜಯದಶಮಿ :

ಎಲ್ಲಾ ಶುಭಕಾರ್ಯಗಳಿಗೆ ಬಹಳ ಪ್ರಾಶಸ್ತ್ಯವಾದ ಈ ದಿನಕ್ಕೆ ಪೌರಾಣಿಕ ಹಾಗೂ ಐತಿಹಾಸಿಕ ಪ್ರಾಮುಖ್ಯತೆಯಿದೆ. "ದುಷ್ಟ ಶಿಕ್ಷಣ ಶಿಷ್ಟ ರಕ್ಷಣ" ದಸರೆಯ ಪೌರಾಣಿಕ ಹಿನ್ನೆಲೆ, ರಾವಣ, ಮಹಿಷಾಸುರರು ವಧೆಯಾದದ್ದು ಈ ದಿನ. ಅರ್ಜುನ ವಿಜಯ ಸಾಧಿಸಿದ್ದು ಈ ದಿನ ಎಂದು ಮಹಾಭಾರತದಲ್ಲಿ ಉಲ್ಲೇಖವಿದೆ. ರಾಜರು ದಿಗ್ವಿಜಯಕ್ಕೆ ಹೊರಡುವ ದಿನವಿದು. ರಾಜರು ಸೈನ್ಯಪರಿವಾರ ಸಮೇತ ಊರ ಹೊರಗೆ ಉತ್ತರ ದಿಕ್ಕಿಗೆ ಹೋಗಿ ಶಮೀಪೂಜೆಯನ್ನು ಮಾಡುವುದು ಈ ದಿನ. ಬನ್ನಿ ಮರದ ಎಲೆ ಕೀಳುವುದು ಮತ್ತು ಹಂಚುವುದು ವಿಜಯದ ಮತ್ತು ಸ್ನೇಹ ಸೌಹಾರ್ದತೆಯ ಸಂಕೇತವಾಗಿದೆ.

ಶಮೀಶಮಯತೇ ಪಾಪಂ
ಶಮೀಶತ್ರು ನಿಬರ್ಹಣಂ
ಅರ್ಜುನಸ್ಯ ಧನುರ್ಧಾರೀ
ರಾಮಸ್ಯ ಪ್ರಿಯದರ್ಶಿಕನೀ

## ಪರಮೋತ್ಸವ-ಜಂಬೂಸವಾರಿ :

ವಿಶೇಷ ಅಲಂಕೃತವಾದ ಆನೆಯ ಮೇಲಿರುವ ಸ್ವರ್ಣದ ಅಂಬಾರಿಯಲ್ಲಿ ಮಹಾರಾಜರು ಕುಳಿತು ಬನ್ನಿಮಂಟಪಕ್ಕೆ ಹೋಗುವ ಮೆರವಣಿಗೆ ವಿಶ್ವದಲ್ಲೇ ಅದ್ವಿತೀಯ ಮತ್ತು ಅತ್ಯದ್ಭುತವಾದದ್ದು. ಇದೇ ದಸರೆಯ ಪ್ರಮುಖ ಆಕರ್ಷಣೆ. ಈ ಆಕರ್ಷಣೆಗೆ ಎರಡು ಕಾರಣಗಳಿವೆ; (1) ಮಹಾರಾಜರನ್ನು ಸಮೀಪದಲ್ಲಿ ದರ್ಶನಮಾಡಬಹುದು. (2) ಮಹಾರಾಜರ ಆಕಾರ, ಮುಖಕಾಂತಿ,

ತೇಜಸ್ಸು, ಅವರ ಪೀತಾಂಬರ–ಜರತಾರಿ ಉಡುಪುಗಳು ಸಿರಿಪೇಟ ತುರಾಯಿ ಆಭರಣಗಳು ಇತ್ಯಾದಿ. "ವಿಷ್ಣುವಿನ ತೇಜಸ್ಸುಳ್ಳ ರಾಜ ರಾಜ್ಯಲಕ್ಷ್ಮಿಯ ಅಪರಾವತಾರ" ಎಂದು ಲೋಕಾಭಿಪ್ರಾಯವಿದೆ. "ಸಾ ವಿಷ್ಣುಃ ಪೃಥಿವೀಪತಿಃ" (ಪರಾಶರಸ್ಮೃತಿ). ಈ ರೀತಿಯಲ್ಲಿ ಮಹಾರಾಜರನ್ನು ಸಮೀಪದಲ್ಲಿ ನೋಡುವುದು ದಸರಾನಂತರ ಬರುವ ಚಾಮುಂಡೇಶ್ವರಿಯ ರಥ ಮತ್ತು ತೆಪ್ಪೋತ್ಸವ (ಇಲ್ಲಿ ಅವರಿಗೆ ಭಾಗವತರ ಉಡುಪು ಇರುತ್ತದೆ) ಮತ್ತು ವಿಶ್ವವಿದ್ಯಾಲಯದ ಘಟಿಕೋತ್ಸವಗಳಲ್ಲಿ (ಇಲ್ಲಿ ಮಹಾರಾಜರ ಉಡುಪು ಬಿಳಿಯ ಶರಾಯಿ, ಉದ್ದನೆಯ ಕೋಟು, ವೆಲ್ವೆಟ್ ಗೌನ್ ಮತ್ತು ಬಟ್ಟಾ ಜರಿಯ ಕೆಂಪು ಬಣ್ಣದ 'ಕ್ಲಬ್' ಪೇಟ ಬಹಳ ರಮ್ಯವಾಗಿರುವುದು).

ಒಂದು ಶುಭಮುಹೂರ್ತದಲ್ಲಿ ಕುಶಾಲತೋಪುಗಳ ಉಡಾವಣೆಯೊಂದಿಗೆ ಪ್ರಭುಗಳು ಅಂಬಾರಿಯಲ್ಲಿ ಆಸೀನರಾಗುವರು. ಉನ್ನತ ಅಧಿಕಾರಿಗಳು ಮತ್ತು ಪ್ರಮುಖವ್ಯಕ್ತಿಗಳು ಆ ಸಂದರ್ಭದಲ್ಲಿ ಹಾಜರಿರುವರು. ಈ ಮೆರವಣಿಗೆಯ ಅವಧಿ ಸುಮಾರು 3 ಘಂಟೆಗಳು. ಇದರ ಚಲನೆಯನ್ನು ನಿಯಂತ್ರಿಸಲು ಇಬ್ಬರು ಕುದುರೆ ಸವಾರರನ್ನು ನೇಮಕ ಮಾಡಲಾಗಿರುತ್ತದೆ. ಮೆರವಣಿಗೆಯನ್ನು ಈ ರೀತಿ ಸಜ್ಜುಗೊಳಿಸಲಾಗಿತ್ತು– ನಂದಿಕಂಬ–ಎರಡು ಜೊತೆ ಒಂಟೆಗಳು, ಆನೆಗಳು (ನಗಾರಿ ಸಮೇತ) ಸೇವಾದಳ, ಬಾಲಕ ಪಡೆ (ಸ್ಕೌಟ್) ಮಿಲಿಟರಿ ಪಡೆ, ಮಧ್ಯೆ ಮಧ್ಯೆ ಚಾರಿತ್ರಿಕ, ಸಾಂಸ್ಕೃತಿಕ ಕೃಷಿ ಮತ್ತು ಕೈಗಾರಿಕಾ ಪ್ರಗತಿಗಳನ್ನು ಸೂಚಿಸುವ ಸ್ತಬ್ಧ ಚಿತ್ರ ಪ್ರತಿಮೆಗಳು (ಟ್ಯಾಬ್ಲೊ) ಎನ್. ಸಿ. ಸಿ, ಪೋಲೀಸ್ ರಿಜರ್ವ್ ದಳ, ಪಂಚರಂಗಿ ಪಡೆ, ಕರ್ನಾಟಕ ಸಂಗೀತ ವಾದ್ಯಗೋಷ್ಠಿ– 'ಮೈಸೂರ್ ಬಾಡಿಗಾರ್ಡ್ಸ್', 'ಮೈಸೂರ್ ಹಾರ್ಸಸ್', ಮತ್ತು 'ಲ್ಯಾನ್ಸರ್', ಎಂಬ ಮೂರು ವಿಧವಾದ ಅಶ್ವದಳ, ಇಂಗ್ಲಿಷ್ ಬ್ಯಾಂಡ್ ಸೆಟ್, ಮಹಾರಾಜರ ಖಾಸಗಿ ಸೈನ್ಯ, ನಾದಸ್ವರ, ಪ್ರಮುಖ ವ್ಯಕ್ತಿಗಳು, ಶಂಖ, ಚಕ್ರಾಂಕುಶ, ಮತ್ಸ್ಯ, ಸಿಂಹ, ಶಾರ್ದೂಲ, ಗಂಡಭೇರುಂಡ, ಬಿರುಪಂತೆಂಬರಗಂಡ ಇತ್ಯಾದಿಯಾಗಿ ಬಿರುದು ಬಿಲ್ಲತ್ತು ಮತ್ತು ಮರ್ಯಾದೆಗಳು, ಆನೆಗಾಡಿ (ಅರಸುಗಳಿಗೆ ಮಾತ್ರ) ಬೆಳ್ಳಿಗಾಡಿ, ಪಂಚಕಳಶದ ಗಾಡಿ, ಮಹಾರಾಜರ ಖಾಸಾ ಮೋಟರ್‌ಕಾರುಗಳು (ರೋಲ್ಸ್‌ರಾಯ್ಸ್ ಮತ್ತು ಡೇಮ್ಲರ್) ಮಳೆ ಬಂದರೆ ರಕ್ಷಣೆಗೋಸ್ಕರ ಚಲಿಸುವ ಮಂಟಪ ಮತ್ತು ಕೊನೆಯದಾಗಿ ನಗಾರಿ ಸಮೇತ ಎರಡು ಜೊತೆ ಆನೆಗಳು. ಮೆರವಣಿಗೆಯನ್ನು ನೋಡಲು ದಾರಿಯುದ್ದಕ್ಕೂ ಲಕ್ಷಾಂತರ ಜನರು ಕಿಕ್ಕಿರಿದು ನಿಂತಿರುತ್ತಿದ್ದರು. ಫಲಪುಷ್ಪಹಾರ ಸಮರ್ಪಣೆ ಮಾಡಲು ಅಲ್ಲಲ್ಲಿ ಮಂಟಪಗಳಿರುತ್ತಿತ್ತು. ಸಂಜೆ ಟಾರ್ಚ್ ಪರೇಡ್ ಎಂಬ ಕವಾಯಿತು ಕಾರ್ಯಕ್ರಮ (ದಸರೆಯ ಮತ್ತೊಂದು ಆಕರ್ಷಣೆ) ಮತ್ತು ಸಾಂಪ್ರದಾಯಕ ಪೂಜಾನಂತರ ಅರಮನೆಗೆ ಮರಳಿ ಬರುವ ಮೆರವಣಿಗೆ ಇನ್ನೂ ಹೆಚ್ಚು ರಮ್ಯವಾಗಿರುತ್ತಿತ್ತು. ಇದರಲ್ಲಿ ಎರಡು ಅಧಿಕ ಆಕರ್ಷಣೆಗಳು ಇರುವುದು. (1) ಬೆಳಗ್ಗೆ ಮಹಾರಾಜರು ಬನ್ನಿಮಂಟಪಕ್ಕೆ ಕಳುಹಿಸಿಕೊಟ್ಟ ದೇವರು, ಪಟ್ಟದಾನೆ, ಸೈನ್ಯ ಇತ್ಯಾದಿಗಳು ಸೇರಿಕೊಳ್ಳುವುದು. (2) ರಾಜ್ಯದ ವಿದ್ಯುತ್ ಮಂಡಳಿಯವರು ಮಾಡಿರುವ ಶ್ರೇಷ್ಠ ಮಟ್ಟದ ದೀಪಾಲಂಕಾರ– ದಾರಿಯುದ್ದಕ್ಕೂ ದೀಪ, ಚೌಕಗಳಲ್ಲಿ ಬಣ್ಣ ಬಣ್ಣದ ಬಲ್ಬುಗಳ ಮಂಟಪಗಳು ಮತ್ತು ಚಾಮುಂಡೀಬೆಟ್ಟದಲ್ಲಿ 'ಸುಸ್ವಾಗತ' ದೀಪಾಕ್ಷರಗಳು. ಇವುಗಳನ್ನು ನೋಡಿದ ಪ್ರವಾಸಿಗರು, "ರಾತ್ರಿ ಹಗಲು ವ್ಯತ್ಯಾಸವೇ ಇಲ್ಲ" ಎಂದು ಬೆರಗಾಗುತ್ತಿದ್ದರು. ಈ ಈ ಹತ್ತು ದಿನಗಳಲ್ಲಿ ನಗರವೆಲ್ಲ ಇಡೀ ರಾತ್ರಿ ಎಚ್ಚರವಾಗಿರುತ್ತಿತ್ತು. ಅನೇಕ ವರ್ಷಗಳ ಹಿಂದೆ ಮಹಾರಾಜರು ಮರಳಿ ಬರುವ ಮೆರವಣಿಗೆಯಲ್ಲಿ ಆನೆಗೆ ಬದಲು ಬೆಳ್ಳಿಯ ರಥದಲ್ಲಿ ಬರುತ್ತಿದ್ದರು. ಒಮ್ಮೆ ತೆರೆದ ಕಾರಿನಲ್ಲಿ ಮೆರವಣಿಗೆಯಾಗಿತ್ತು. 1970–71–72 ರಲ್ಲಿ ದಸರೆಯು ಬಹಳ ಸರಳ ರೀತಿಯಲ್ಲಿ ನಡೆದು ಅರಮನೆಯಲ್ಲಿರುವ ಸೋಮೇಶ್ವರ ದೇವಾಲಯದಲ್ಲಿ ಶಮೀ ಪೂಜೆ ನಡೆಯಿತು. ದರ್ಬಾರ್ ಕಾರ್ಯಕ್ರಮಗಳು ಅಂಬಾವಿಲಾಸ ತೊಟ್ಟಿಯಲ್ಲಿ ನಡೆಯಿತು. ಇವುಗಳಲ್ಲಿ ಸಾರ್ವಜನಿಕರಿಗೆ ಪ್ರವೇಶವಿಲ್ಲ.

ಈಗ ಎರಡು ದಶಕಗಳಲ್ಲಿ ವೈಭವ ಪೂರಿತವಾದ ದಸರೆಯಲ್ಲಿ ವ್ಯತ್ಯಾಸ ಕಂಡುಬಂದಿದೆ. ರಾಜಧನ ಮತ್ತು ಹಕ್ಕು ಬಾಧ್ಯತೆಗಳು ರದ್ದಾಯಿತು. ಇದರಿಂದ ಶಾಸ್ತ್ರೋಕ್ತ ಹಾಗೂ ಐತಿಹಾಸಿಕ ದಸರೆ ರದ್ದಾಯಿತು. ದರ್ಬಾರ್ ಇಲ್ಲ. ಮಹಾರಾಜರ ಬದಲು ಭುವನೇಶ್ವರಿಯ ಪ್ರತಿಮೆ ಮೆರವಣಿಗೆ ಜಾರಿಗೆ ಬಂತು. ಈ ವಿಷಯದಲ್ಲಿ ಜನರ ಅಭಿಪ್ರಾಯ ಸ್ವಾರಸ್ಯವಾಗಿದೆ. ವರ್ಷದಿಂದ ವರ್ಷಕ್ಕೆ ಶಾಸ್ತ್ರೋಕ್ತವಾದ ದಸರ ಕ್ಷೀಣವಾಗಿ ಈಗ ಸರ್ಕಾರವೇ (ದಸರಾಸಮಿತಿ) ಒಂದು ಜನತಾ ಹಬ್ಬದಂತೆ ಈ ನಾಡಹಬ್ಬವನ್ನು ತನ್ನ ನೇತೃತ್ವದಲ್ಲಿ ಆಚರಿಸಿದರೂ, ಹಿಂದಿನ ವೈಭವ ಇದರಲ್ಲಿ ಕಾಣುವುದಿಲ್ಲ. ಧ್ರುವತಾರೆಯಂತೆ ಅದು ಆಕಾಶದ ನಕ್ಷತ್ರಸಮೂಹದಲ್ಲಿ ಸೇರಿ ಬೆರೆತು ಹೋಗಿದೆ. ಬರುವ ಪೀಳಿಗೆಗೆ ಅದೊಂದು ಗತವೈಭವವಾಗಿ, ಚರಿತ್ರೆಯಲ್ಲಿ ಸೇರಿ ಸ್ಮಾರಕವಾಗುವುದರಲ್ಲಿ ಸಂಶಯವಿಲ್ಲ.



(12 ನೇ ಪುಟದಿಂದ)

ರುಕ್ಮಿಣೀದೇವಿ ಮತ್ತು ಕೃಷ್ಣ ಅಯ್ಯರ್‌ರವರ ನಿರಂತರ ಪ್ರಯತ್ನದ ಫಲವಾಗಿ ನೃತ್ಯಕಲೆಯು ಪುನರುತ್ಥಾನವಾಯಿತು. ಬೆಂಗಳೂರಿನ ರಾಮಗೋಪಾಲರವರು ನಾಟ್ಯಸಂಸ್ಥೆಯನ್ನು ಸ್ಥಾಪಿಸಿ ನಾಟ್ಯಕಲೆಗೆ ತಮ್ಮ ತನು, ಧನ, ಮನವನ್ನರ್ಪಿಸಿದರು. ಯು.ಎಸ್. ಕೃಷ್ಣರಾಯರೂ ಈ ಪಂಗಡಕ್ಕೆ ಸೇರಿ, ಮೈಸೂರು ಸಂಸ್ಥಾನದಲ್ಲೆಲ್ಲ ಭರತನಾಟ್ಯ ಕಲೆಯನ್ನು ಪ್ರಸಾರಮಾಡಿದರು. ಇವರೂ, ಇವರ ಪತ್ನಿ ಚಂದ್ರಭಾಗಾದೇವಿಯವರೂ ಸಂಸ್ಥಾನಾದ್ಯಂತ ಪ್ರವಾಸಮಾಡಿ ಉಪನ್ಯಾಸಗಳನ್ನಿತ್ತು ವಿವಿಧ ಜನರಿಗೆ ಈ ಕಲೆಯನ್ನು ಕಲಿಸಿದರು. ಇವರಿಂದ ಮೈಸೂರು ಭರತನಾಟ್ಯ ಸಂಪ್ರದಾಯಕ್ಕೆ ವಿಶೇಷ ಗೌರವವುಂಟಾಯಿತು. ಇವರು ಹಿಂದಿನ ಶಾಸ್ತ್ರೋಕ್ತ ಭರತನಾಟ್ಯ ತಳಹದಿಯ ಮೇಲೆ ಹೊಸಪ್ರಯೋಗಗಳನ್ನು ನಡೆಸಿದ್ದಾರೆ. ಇವರು ಕನ್ನಡ ಭಾಷೆಯ ಪದಗಳನ್ನು ಭರತನಾಟ್ಯಕ್ಕೆ ಅಳವಡಿಸಿಕೊಂಡವರಲ್ಲಿ ಮೊದಲಿಗರು.

ಈಗ ಮೀನಾಕ್ಷೀಸುಂದರಂಪಿಳ್ಳೆಯವರ ಪುತ್ರರಾದ ವಿದ್ವಾನ್ ಮುತ್ತಯ್ಯಪಿಳ್ಳೆ ಮತ್ತು ಮೊಮ್ಮಕ್ಕಳಾದ "ವಿದ್ವಾನ್ ಕಿಟ್ಟಪ್ಪನವರು" ಪಂದನಲ್ಲೂರು ಸಂಪ್ರದಾಯವನ್ನು ಕನ್ನಡಿಗರಿಗೆ ಹೇಳಿಕೊಡುವುದಕ್ಕಾಗಿ ಬೆಂಗಳೂರಿನಲ್ಲಿಯೇ ಬಂದು ನೆಲೆಸಿದ್ದಾರೆ. ಇತ್ತೀಚೆಗೆ ಮೀನಾಕ್ಷಿಸುಂದರಂ ಪಿಳ್ಳೆಯವರ ಹೆಸರಿನಲ್ಲಿ ಶ್ರೀಮತಿ ಲಲಿತಾರಾಮನಾಥನ್ ಅವರ ನೇತೃತ್ವದಲ್ಲಿ ಬಂದು ಭರತನಾಟ್ಯಶಾಲೆಯು ಸ್ಥಾಪಿತವಾಗಿದೆ. ಇಲ್ಲಿ ತಯಾರಾದ ಕುಮಾರಿಯರಾದ "ಆಶಾ" ಮತ್ತು "ರೇವತಿ" ವಿಶ್ವವಿಖ್ಯಾತರಾಗಿದ್ದಾರೆ.

ಬೆಂಗಳೂರಿನಲ್ಲಿಯೇ ಪ್ರಖ್ಯಾತರಾದ ಇನ್ನೂ ಇತರ ನಾಟ್ಯಶಾಲೆಗಳಿವೆ. ಅವುಗಳಲ್ಲಿ ಯು.ಎಸ್. ದಂಪತಿಗಳು ಸ್ಥಾಪಿಸಿರುವ "ನೃತ್ಯವೀರ", "ಮಹಾಮಾಯಾ ನೃತ್ಯಪೀರ" ಅನೇಕ ಕಲಾವಿದರನ್ನು ಸಿದ್ಧಪಡಿಸಿವೆ. ಭಾರತೀಯ ವಿದ್ಯಾಭವನದ ನೃತ್ಯಕೇಂದ್ರ, "ನಟುವನಾರ್ ಕೃಷ್ಣಪ್ಪನವ"ರ ಶಿಷ್ಯ ಎಚ್.ಆರ್. ಕೇಶವಮೂರ್ತಿಯವರ "ಕೇಶವ ನೃತ್ಯಶಾಲಾ" ಎ.ಎಸ್. ಕೌಶಿಕ್ ನಡೆಸುತ್ತಿರುವ "ಸನಾತನ ಕಲಾಕ್ಷೇತ್ರ", ಮಾಣಿಕ್ಯಂ ಅವರ "ಭರತನಾಟ್ಯ ಕಲಾಶಾಲಾ", ಲಲಿತಾದೊರೆಯವರ "ಗಣೇಶನೃತ್ಯಶಾಲಾ", ಟಿ. ಎಸ್. ಭಟ್ಟರ "ಮೇನಕ ನೃತ್ಯಶಾಲಾ" ಶೇಖರ್‌ರ "ಸರಸ್ವತೀ ನೃತ್ಯಶಾಲಾ" ಇವು ಪ್ರಖ್ಯಾತವಾದವು. ಬೆಂಗಳೂರಿನಲ್ಲಿ ಪ್ರಖ್ಯಾತರಾದ ಇತರ ನಾಟ್ಯಕಲಾವಿದರೂ ಇದ್ದಾರೆ.

ಮಂಗಳೂರಿನಲ್ಲಿ ಯು. ಎಸ್. ಕೃಷ್ಣರಾಯರ "ನೃತ್ಯವಿದ್ಯಾಲಯ"ದಲ್ಲಿ ಭರತನಾಟ್ಯವೇ ಅಲ್ಲದೆ ಕಥಕ್ಕಳಿಯೂ ಶಾಸ್ತ್ರೀಯಮಾರ್ಗದಲ್ಲಿ ಉಚಿತವಾಗಿ ಹೇಳಿಕೊಡಲಾಗುತ್ತಿದೆ. ಉತ್ತರ ಕರ್ನಾಟಕದಲ್ಲಿ ಶ್ರೀನಿವಾಸ ಕುಲಕರ್ಣಿಯವರು ಸ್ಥಾಪಿಸಿರುವ "ನೃತ್ಯಭಾರತಿ"ಯು ಕೆಲಸಮಾಡುತ್ತಿದೆ. ಕುಲಕರ್ಣಿಯವರು 20–30 ವರ್ಷಗಳಿಂದ ಅನೇಕ ನೃತ್ಯೋಪಾಧ್ಯಾಯರುಗಳ ಮೂಲಕ ಹಳ್ಳಿಹಳ್ಳಿಗಳಲ್ಲೂ ಭರತನಾಟ್ಯ, ಕಥಕ್ಕಳಿ ಮತ್ತು ಇತರ ರೀತಿಯ ನೃತ್ಯಗಳನ್ನು ಹೇಳಿಕೊಡುತ್ತಿದ್ದಾರೆ. ಈಗ ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳಲ್ಲಿ ಲಲಿತಕಲೆಗಳ ಕಾಲೇಜುಗಳನ್ನು ಆರಂಭಿಸಿರುವುದು ಕಲಾಭ್ಯಾಸಿಗಳಿಗೆ ವಿಶೇಷ ಸಹಾಯವಾಗಿದೆ.



## ತಿರುಮಲೆ ತಿರುಪತಿ ದೇವಸ್ಥಾನಗಳು.

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 12.5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ. ರೂ 10 ಲಕ್ಷ ನೀಡಿದಲ್ಲಿ ಇನ್ನು ಮುಂದೆ ಪ್ರತಿದಿನ 400 ಮಂದಿಗೆ ಮಾತ್ರ ಉಚಿತ ಭೋಜನ ನೀಡಲಾಗುವುದು.
* ಈಗಾಗಲೇ ರೂ 10 ಲಕ್ಷ ದತ್ತಿ ನೀಡಿರುವವರ ಹೆಸರಿನಲ್ಲಿ ಪ್ರತಿದಿನ 500 ಮಂದಿಗೆ ಭೋಜನ ವ್ಯವಸ್ಥೆ ಮಾಡಲಾಗುವುದು. (ಉಳಿಕೆ ಹಣ ತಿ.ತಿ.ದೇ. ನಿಧಿಯಿಂದ ಹಾಕಲಾಗುತ್ತದೆ).
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಅರತಿಯನ್ನು ಒದಗಿಸಲಾಗುವುದು.
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ **10** ಲಕ್ಷ |
| 2. | ಶ್ರೀ ಮಾನಸಿಂಗ್ ಶಾ, ಬೊಂಬಾಯಿ | ರೂ **20** ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ **10** ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ **10** ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ **10** ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂ.ಪ್ರ.**

**ಕಾರ್ಯನಿರ್ವಹಣಾಧಿಕಾರಿ**

# ಮಹಾತ್ಮಾ ಕಬೀರ

**ಶ್ರೀ ವ.ತಿ. ರಾಮಕೃಷ್ಣಯ್ಯ 'ರಾಕಿ'**

ಭೂತೇಶನೆರಗುವನು ಜಾತಿ ಮಾದಿಗನಲ್ಲ
ಜಾತಿಯಲಿ ಹುಟ್ಟಿ ಶಿವನಿಗೆ ಶರಣೆನ್ನ –
ಜಾತ ಮಾದಿಗನು ಸರ್ವಜ್ಞ

ಎಂಬ ಸರ್ವಜ್ಞನ ಲೋಕೋಕ್ತಿ ಸತ್ಯಕ್ಕೆ, ಬದುಕಿಗೆ ಎಷ್ಟೊಂದು ಹತ್ತಿರವಾದದ್ದು. ಮಾನವನಲ್ಲಿ ತುಂಬಿ ತುಳುಕುತ್ತಿರುವ ಮೇಲು ಕೀಳು, ಜಾತಿ, ಧರ್ಮ ಎಂಬ ಹತ್ತಾರು ತಾರತಮ್ಯದ ಜನರ ಕೀಳರಿಮೆಯನ್ನು ಕಂಡೇ ಸರ್ವಜ್ಞ ಇಂಥ ಲೋಕೋದ್ಧಾರದ ಮಾತುಗಳನ್ನು ಹೇಳಿದ್ದಾನೆ. ಲೋಕದ ಪರಿಸ್ಥಿತಿ ಹದಗೆಟ್ಟು, ನೀತಿ – ಅನೀತಿಯಾದಾಗ, ಧರ್ಮ ಅಧರ್ಮದ ಕಡೆಗೆ ವಾಲುವಾಗ ಜನತೆಯಲ್ಲಿ ಮೇಲು ಕೀಳೆಂಬ ಬೇಧ ಭಾವದಿಂದ ಲೋಕವು ತತ್ತರಿಸುವ ಕಾಲದಲ್ಲಿ ಲೋಕೋದ್ಧಾರಕ್ಕಾಗಿ – ಧರ್ಮೋದ್ಧಾರಕ್ಕಾಗಿ ಈ ಭುವಿಯ ಮೇಲೆ ಮಹಾಪುರುಷರ ಅವತಾರವಾಗುತ್ತದೆ. ಇಂಥ ಒಂದು ಅವತಾರ ಸ್ಥಿತಿ ನಮ್ಮ ಭಾರತದಲ್ಲಿ 15 ನೆಯ ಶತಮಾನದಲ್ಲಿ ಕಬೀರರ ಮೂಲಕ ಉಂಟಾದುದನ್ನು ಇಲ್ಲಿ ಸ್ಮರಿಸಬಹುದು.

ಹಲವಾರು ಜಾತಿ, ಧರ್ಮ, ಭಾಷೆ, ಜನ, ಸಂಸ್ಕೃತಿಗಳ ತೌರು ಭರತಖಂಡ. ಭಾರತ ದೇಶದ ಉತ್ತರ ಹಿಂದೂಸ್ತಾನದಲ್ಲಿ 15ನೆಯ ಶತಮಾನದಲ್ಲಿ ರಾಜಕೀಯ ಪರಿಸ್ಥಿತಿ ತೀರ ಹದಗೆಟ್ಟು ದೇಶ ಅಲ್ಲೋಲಕಲ್ಲೋಲವಾಯಿತು. ಕ್ರಿ. ಶ. 1398ರ ವೇಳೆಗೆ ದಿಲ್ಲಿ ಸಾಮ್ರಾಜ್ಯ ತೈಮೂರಲಂಗನ ಧಾಳಿಗೆ ಸಿಕ್ಕಿ ಪುಡಿ ಪುಡಿಯಾಯಿತು. ಅತ್ಯಧಿಕ ಸಂಖ್ಯೆಯಲ್ಲಿ ಮುಸಲ್ಮಾನರು ಇಲ್ಲಿ ಬಂದು ನೆಲೆಸಿದ್ದರಿಂದ ದೇಶದ ಪರಿಸ್ಥಿತಿಯಲ್ಲಿ ಬಹಳಷ್ಟು ಪರಿವರ್ತನೆಗಳು ಉಂಟಾದವು. ಆಗ ಹಿಂದೂ ಜನತೆಗೆ ಜೀವನದ ಬಗ್ಗೆ ನಿರಾಶೆ, ಧರ್ಮದ ಬಗ್ಗೆ ನಿರಾದರ ಉಂಟಾಯಿತು. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಹಿಂದೂ – ಮುಸಲ್ಮಾನರಲ್ಲಿ ಪರಸ್ಪರ ಪ್ರೇಮ ಮತ್ತು ಭಾವೈಕ್ಯತೆಯನ್ನು ಬೆಳೆಸುವುದು ಅತ್ಯಂತ ಅವಶ್ಯವಾಗಿತ್ತು. ಈ ಎರಡೂ ಧರ್ಮದ ಜನರು ಕಲಹಕ್ಕೆ ತುತ್ತಾಗಿ ಅನರ್ಥ ಕ್ರೀಡಾಗದಂತೆ ವಿವೇಕವನ್ನು ಸಾರುವ – ಜ್ಞಾನವನ್ನು ಬೀರುವ ಒಬ್ಬ ಸಮರ್ಥ ಮಹಾಪುರುಷನ ಅವಶ್ಯಕತೆ ಆ ಸಮಯದಲ್ಲಿ ಅಗತ್ಯವಾಗಿತ್ತು. ಇಂತಹ ಸಂದಿಗ್ಧ ಸಮಯದಲ್ಲಿಯೇ ಶಾಂತಿವಾದಿ– ವಿಶ್ವಪ್ರೇಮಿ ಕಬೀರರು 15ನೆಯ ಶತಮಾನದಲ್ಲಿ (ಕ್ರಿ. ಶ. 1398 ರಲ್ಲಿ) ಜನ್ಮತಾಳಿದರು; ಅರ್ಥಾತ್ ಅವತರಿಸಿದರು ಎಂದೇ ಹೇಳಬಹುದು.

ಇಂತಹ ಮಹಾಪುರುಷರೂ, ಸರ್ವಧರ್ಮ ಸಮನ್ವಯಿಗಳೂ, ಶಾಂತಿಪ್ರಿಯರೂ ಆದ ಕಬೀರರ ಜನನದ ಬಗ್ಗೆ ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ಈ ನಿಟ್ಟಿನಲ್ಲಿ ಸಂಶೋಧನಾ ಕಾರ್ಯ ಸಾಗಿ ನಿಶ್ಚಿತವಾದ ಸ್ಥೂಲ ವೃತ್ತಾಂತಗಳು ಯಥಾವತ್ತಾಗಿ ಬೆಳಕಿಗೆ ಬರುವಂತಾದರೆ ಅದೊಂದು ಜನತೆಗೆ, ಸಮಾಜಕ್ಕೆ, ಧರ್ಮಕ್ಕೆ ಮಾಡಿದ ಮಹದುಪಕಾರದ ಕೆಲಸವೆಂದೇ ಭಾವಿಸಬೇಕು. ಆದರೂ ಇಂತಹ ಮಹಾತ್ಮರ ಜನ್ಮ ವೃತ್ತಾಂತದ ಬಗ್ಗೆ ಸದ್ಯಕ್ಕೆ ಪ್ರಚಲಿತವಾದ ವಿಷಯವನ್ನು ನಾವು ಗಮನಿಸಬೇಕಾಗುತ್ತದೆ– ನಂಬಬೇಕಾಗುತ್ತದೆ.

ಕಾಶಿನಗರದಲ್ಲಿ "ನೀರೂ" ಮತ್ತು "ನೀಮಾ" ಎಂಬ ಮುಸಲ್ಮಾನ ದಂಪತಿಗಳು ವಾಸವಾಗಿದ್ದರು. ಅವರಿಗೆ ಬಹಳ ವರ್ಷಗಳಿಂದಲೂ ಮಕ್ಕಳಿರಲಿಲ್ಲ. ಸದಾ ದೈವವನ್ನು ಭಕ್ತಿಯಿಂದ ಭಜಿಸುತ್ತ ನೇಕಾರ ವೃತ್ತಿಯಿಂದ ಉದರ ಪೋಷಣೆ ಮಾಡುತ್ತ ಕಾಲಹರಣ ಮಾಡುತ್ತಿದ್ದರು. ಈ ರೀತಿ ಇರುವಾಗ ಒಂದು ದಿನ 'ನೀರೂ' ತನ್ನ ಕಾಯಕದಲ್ಲಿ ತೊಡಗಿ 'ಲಹರಾ ತಾರಾ' ಎಂಬ ಕೆರೆಯ ದಂಡೆಯ ಮೇಲೆ ಸಾಗಿ ಬರುತ್ತಿರಲು ಆಕಸ್ಮಿಕವಾಗಿ ಆ ಕೆರೆಯ ದಂಡೆಯಲ್ಲಿ ಯಾರೋ ಮಲಗಿಸಿ ಹೋಗಿದ್ದ ಮುಗ್ಧ ಕೂಸೊಂದನ್ನು ಕಂಡ. ಆ ಕ್ಷಣ ಕೂಸಿನ ಮೇಲೆ, ಮಮತೆ, ಕರುಣೆ ಉಂಟಾಗಲು, ಹತ್ತಿರ ಹೋಗಿ ಮಗುವನ್ನೇ ತದೇಕಚಿತ್ತದಿಂದ ನೋಡತೊಡಗಿದ. ಇವನ ಮುಖವನ್ನು ಕಂಡ ಕೂಸು ಕಿಲಕಿಲನೆ ನಗುತ್ತಿತ್ತು. ಕ್ಷಣ ಯೋಚಿಸಿದ 'ನೀರೂ' ಮಕ್ಕಳಿಲ್ಲದ ನಮಗೆ ದೇವರೇ ಈ ಕೂಸನ್ನು ವರವಾಗಿ ಕರುಣಿಸಿದ್ದಾನೆ ಎಂದು ಅರಿತು ಆ ಅನಾಥ ಕೂಸನ್ನೆತ್ತಿಕೊಂಡು ತನ್ನ ಪತ್ನಿಯ ಉಡಿಯಲ್ಲಿ ಹಾಕಿದನು. ಆ ಕ್ಷಣವೇ ಮಕ್ಕಳಿಲ್ಲದ 'ನೀಮಾ'ಳ ಸ್ತನಗಳಲ್ಲಿ ಹಾಲು ಪ್ರವಿಸತೊಡಗಿತು. ಈ ಸುಕೃತವನ್ನು ಕಂಡ ಅವಳು ಅಚ್ಚರಿಗೊಂಡಳು. ಇದೆಲ್ಲವೂ ದೇವರ ವರದಿಂದ ದೊರೆತ ಈ ಕೂಸಿನ ಪುಣ್ಯವೆಂದು ಭಾವಿಸಿ ಕೂಸನ್ನು ಅತ್ಯಂತ ಪ್ರೀತಿಯಿಂದ ಸಾಕತೊಡಗಿದಳು.

ಇತ್ತ ನೀರೂ ತಮ್ಮ ಧರ್ಮನೇಮದಂತೆ ಕೂಸಿಗೆ ಹೆಸರೇನಿಡಬೇಕೆಂದು ತಮ್ಮ ಧರ್ಮಗುರುಗಳಲ್ಲಿ ಹೋಗಿ ವಿನಂತಿಸಿಕೊಂಡರು. ಖುರಾನ್ ಅನ್ನು ತೆರೆದು ನೋಡಿದ ಗುರುಗಳು 'ಕಬೀರ'ಎಂಬ ಹೆಸರನ್ನು ಸೂಚಿಸಿದರು. ಅದರಂತೆ ಅಂದಿನಿಂದ ಈ ಅನಾಥ ಕೂಸು 'ನೀರೂ' 'ನೀಮಾ'ರ ಪ್ರೀತಿಯ ಕೂಸಾಗಿ, ವಾತ್ಸಲ್ಯದ ಹೂವಾಗಿ ಕಬೀರನಾಗಿ– ಲೋಕೋದ್ಧಾರಕನಾಗಿ ಬೆಳೆಯ ತೊಡಗಿತು.

ಇಂತಹ ಮಹಾತ್ಮರ ಜೀವನ ವೃತ್ತಾಂತದ ಬಗ್ಗೆ ಮತ್ತೊಂದು ಕಥೆಯೂ ಇದೆ. ಇದು ಒಬ್ಬ ಬ್ರಾಹ್ಮಣ ವಿಧವೆಯ ಕೂಸೆಂದೂ, ಸಮಾಜ ನಿಂದೆಗೆ ಹೆದರಿದ ಆ ಹೆಣ್ಣು ಈ ಕೂಸನ್ನು 'ಲಹರಾ ತಾರಾ' ಕೆರೆಯದಂಡೆಯ ಮೇಲೆ ಬಿಟ್ಟು ಬಂದಿದ್ದಳೆಂದೂ, ಇದೇ ಕೂಸು 'ನೀರೂ–ನೀಮಾ'ರಿಗೆ ದೊರೆತು ಮುಸಲ್ಮಾನನಾಗಿ ಬೆಳೆದು, ಕಬೀರನಾಗಿ ಕೀರ್ತಿಶೇಷವಾಯಿತೆಂದೂ ತಿಳಿದು ಬರುತ್ತದೆ. ಅದೇನೇ ಇದ್ದರೂ 'ಮಹಾತ್ಮರ ಮೂಲ–ಸಾಗರದ ಆಳ' ಎಣಿಸಬಾರದು – ಗುಣಿಸಬಾರದು. ಅಷ್ಟಕ್ಕೂ ಹುಡುಕ ಹೊರಟಷ್ಟೂ ವಿಶಾಲವಾಗುತ್ತ, ವಿಚಿತ್ರವಾಗುತ್ತ ಹೋಗುತ್ತದೆ ಎನ್ನುತ್ತಾರೆ. ಸದ್ಯಕ್ಕೆ ಇಲ್ಲಿ ಆ ಮಹಾತ್ಮರ ಮೂಲವಾಗಲಿ, ಸಾಗರದ ಆಳವಾಗಲಿ ಮುಖ್ಯವಲ್ಲ: ಅವರಿಂದ–ಅದರಿಂದ ನಮಗೆ, ನಮ್ಮ ಬದುಕಿಗೆ ಆ ಮೂಲಕ ಆತ್ಮೋದ್ಧಾರಕ್ಕೆ – ಸಮಾಜಕ್ಕೆ ದೊರೆತದ್ದೂ, ಉಳಿದದ್ದು ಅತಿ ಮುಖ್ಯ. ಅದರಂತೆ ಕಬೀರ ಮುಸಲ್ಮಾನನಾಗಿ ಬೆಳೆಯುತ್ತಿದ್ದರೂ ಹೃದಯದಲ್ಲಿ – ಅಂತರಾತ್ಮದಲ್ಲಿ ಹಿಂದೂ ಧರ್ಮದಲ್ಲಿ ಆಸಕ್ತಿಯನ್ನೂ, ಭಕ್ತಿಯನ್ನೂ ಮೈಗೂಡಿಸಿಕೊಂಡು ಭದ್ರವಾದ ಭಕ್ತಿಯ ನೆಲೆಗಟ್ಟನ್ನು ಸ್ಥಾಪಿಸಿಕೊಂಡ. ಅದು ಆಗ ಆತನಿಗೂ ಆತನ ಮೂಲಕ ಸಮಾಜಕ್ಕೂ ಅನಿವಾರ್ಯವೂ ಅವಶ್ಯವೂ ಆಗಿತ್ತು. ಹಿಂದೂ ಧರ್ಮದಿಂದ ಆಕರ್ಷಿತನಾದ ಕಬೀರ ಸದಾ ಮನದಲ್ಲಿ ರಾಮನಾಮವನ್ನು ಜಪಿಸತೊಡಗಿದ. ಮುಸಲ್ಮಾನನಾದ ಮಗನು ಹಿಂದೂ ದೇವರ ಹೆಸರನ್ನು ಭಜಿಸುವುದು ತಂದೆ ತಾಯಿಗಳಿಗೆ ಬೇಸರವನ್ನು ಉಂಟುಮಾಡಿತು. ಇದರಿಂದ ಮಗನನ್ನು ತಿದ್ದಲು ಬಹಳವಾಗಿ ಶ್ರಮಿಸಿ ಕೊನೆಗೆ ತಾವೇ ಸೋತು ಸುಮ್ಮನಾದರು. ಮಗನು ಬೆಳೆದು ಪ್ರವರ್ಧಮಾನಕ್ಕೆ ಬರತೊಡಗಿದಂತೆ ಅವನಲ್ಲಿ ಹುದುಗಿದ್ದ ಹಿಂದೂ ಧರ್ಮಾಕರ್ಷಣೆಯೂ, ರಾಮನಾಮಸ್ಮರಣೆಯು ಇನ್ನೂ ಹೆಚ್ಚಾಗಿ ಬೆಳೆಯತೊಡಗಿತು. ಇದರಿಂದ ಮತ್ತಷ್ಟು ಕುಪಿತಗೊಂಡ ಕಬೀರನ ತಂದೆತಾಯಿಗಳು ಕಬೀರನನ್ನು ಚೆನ್ನಾಗಿ ಥಳಿಸಿದರು. ಸಿಡಿಮಿಡಿಗೊಳ್ಳುತ್ತಿದ್ದರು. ಇತ್ತ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

ಪೆಟ್ಟಿನಿಂದ ಚಿನ್ನದಂತೆ ಭಕ್ತಿಯ ಪಕ್ವತೆಯನ್ನು ಕಂಡುಕೊಳ್ಳತೊಡಗಿದ ಕಬೀರ. ಹೀಗೆಯೇ ಬೆಳೆದು ದೊಡ್ಡವನಾದ ಕಬೀರ ಈಗ ಗುರು ಕೃಪೆಗಾಗಿ ಹಾತೊರೆಯತೊಡಗಿದನು. ಆಗಿನ ಸಮಯದಲ್ಲಿ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಶ್ರೀ ರಮಾನಂದರ ಹೆಸರು ಎಲ್ಲೆಡೆಯೂ ಕೇಳಿ ಬರುತ್ತಿತ್ತು. ಹಿಂದೂ ಧರ್ಮ ಪರಿಪಾಲಕರಾದ ರಮಾನಂದರ ಕೃಪೆಗೆ ಒಳಗಾಗಿ ದಾಸದೀಕ್ಷೆ ಸ್ವೀಕರಿಸಿ ಕೃತಪುಣ್ಯನಾಗಬೇಕೆಂದು ತೀರ್ಮಾನಿಸಿ ಕಬೀರ ಅವರಿದ್ದ ಸ್ಥಳಕ್ಕೆ ಧಾವಿಸಿದ. ಆದರೆ ಮುಸಲ್ಮಾನನಾದ ತನ್ನನ್ನು ಹಿಂದೂ ಗುರುಗಳಾದ ಅವರು ಖಂಡಿತಾ ಸ್ವೀಕರಿಸಲಾರರೆಂದು ಆಲೋಚಿಸಿ ಸೂಕ್ತ ಮಾರ್ಗಕ್ಕಾಗಿ ಚಿಂತಿಸಿದ.

ಕಬೀರ ಒಂದು ದಿನ ಶ್ರೀ ರಾಮನನ್ನು ಅನನ್ಯ ಭಕ್ತಿಯಿಂದ ಭಜಿಸುತ್ತ ಗುರುಕೃಪೆಗಾಗಿ ಯಾಚಿಸಿ ದಯೆ ತೋರಬೇಕೆಂದು ಪ್ರಾರ್ಥನೆ ಗೈಯುತ್ತ ಗಂಗಾತಟಾಕದ ಮೆಟ್ಟಿಲುಗಳ ಮೇಲೆ ತಲೆಹಾಕಿ ಮಲಗಿಬಿಟ್ಟ. ಇತ್ತ ಬ್ರಾಹ್ಮೀ ಮುಹೂರ್ತದಲ್ಲಿ ಸ್ನಾನಕ್ಕೆಂದು ನದಿಗೆ ಧಾವಿಸುತ್ತಿದ್ದ ರಮಾನಂದರು ತಿಳಿಯದೇ ಕಬೀರನ ತಲೆಯ ಮೇಲೆ ತಮ್ಮ ಪಾದಗಳನ್ನಿರಿಸಿದರು. ಆ ಕೂಡಲೇ ಅರಿವಾಗಿ 'ರಾಮ' 'ರಾಮ' ಎಂದು ಉದ್ಗರಿಸುತ್ತ ತಲೆಬಾಗಿ ಕೆಳಗೆ ನೋಡಿದರು. ಕಬೀರ ರಮಾನಂದರ ಪಾದಗಳನ್ನು ಭದ್ರವಾಗಿ ತಬ್ಬಿ ಹಿಡಿದು "ಗುರುಗಳೇ ತಮ್ಮ ಬಾಯಿಂದ ಬಂದ 'ರಾಮ'ನಾಮವೇ ನನಗೆ ದೀಕ್ಷೆಯಾಯಿತು. ತಮ್ಮ ಪಾದಸ್ಪರ್ಶವೇ ನನಗೆ ಪುಣ್ಯವಾಯಿತು" ಎಂದು ಕೊಂಡಾಡಿ ಸ್ಮರಿಸತೊಡಗಿದ. ಈತನ ನಿಷ್ಕಲ್ಮಶವಾದ ಭಕ್ತಿ ವೈರಾಗ್ಯಕ್ಕೆ ಮೆಚ್ಚಿದ ರಮಾನಂದರು ಕಬೀರನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಆಶೀರ್ವದಿಸಿದರು.

ಹೀಗೆ ಗುರುಕೃಪೆಯಾಗಲು ಕಬೀರನ ಮನ್ಸಿಯಲ್ಲಿ ಹೊಸ ಚೈತನ್ಯ ಮೂಡಿಬಂತು. ರಾಮನಾಮ ಸ್ಮರಣೆಯಲ್ಲಿಯೇ ಸದಾ ಮೈಮರೆತು ದಾಸಪಂಥದ ಮೇರು ಮಂದಾರವಾದನು. ಅಂದಿನಿಂದ ಸರ್ವ ಧರ್ಮ ಸಮತಾವಾದಿಯಾಗಿ ಲೋಕ ಕಲ್ಯಾಣಕ್ಕಾಗಿ ಧರ್ಮೋದ್ಧಾರಕ್ಕಾಗಿ ತನ್ನ ಸಂಪೂರ್ಣ ಆಯುಸ್ಸನ್ನು ಮುಡಿಪಾಗಿಸಿದನು. ಆ ಮೂಲಕ ಸಮಾಜವನ್ನು ತಿದ್ದಿ ಜನತೆಯ ಆತ್ಮೋದ್ಧಾರ ಗೈದಿದ್ದಾನೆ, ಅವನು ಎಲ್ಲ ಧರ್ಮವನ್ನೂ, ಎಲ್ಲ ಜನರನ್ನೂ ಸಮತಾಭಾವದಿಂದ ಕಾಣುತ್ತಿದ್ದನು. ಅಂತೆಯೇ ಆ ನಿಟ್ಟಿನಲ್ಲಿ ಅವನ ಜ್ಞಾನ ಪಿಪಾಸೆ ವಿಶಾಲವಾಗತೊಡಗಿತು– ವಿಸ್ತೃತವಾಗತೊಡಗಿತು. ಆತನ ಕಾವ್ಯಗಳಲ್ಲಿ ಮಾತಿನ ಚಾತುರ್ಯವನ್ನೂ ಆತ್ಮಜ್ಞಾನದ ಅನುಭವವನ್ನೂ ಕಾಣಬಹುದು; ನೋಡಿ–

ಆತಮ ಅನುಭವ ಜ್ಞಾನ್ ಕೀ ಜೊ
ಕೋಯಿ ಪೂಛೈ ಬಾತ್
ಸೋ ಗೂಂಗಾ ಗುಡ ಖಾಯಿ
ಕೈ ಕಹೈ ಕೌನ್ ಮುಖ ಸ್ವಾದ್

ಆತ್ಮಾನುಭವದ ಜ್ಞಾನದ ಬಗ್ಗೆ ವಿವರಿಸಿ ಹೇಳು– ಎಂದು ಯಾರಾದರೂ ಕೇಳಿದರೆ ಅದಕ್ಕೆ ಉತ್ತರಿಸುವುದು ಸಾಧ್ಯವಿಲ್ಲ. ಬೆಲ್ಲದ ರುಚಿಯನ್ನು ಅನುಭವಿಸಿದ ಮೂಕನು ಅದರ ಬಗ್ಗೆ ಏನು ತಾನೆ ಹೇಳಬಲ್ಲ? ಹಾಗೆ ಆತ್ಮಾನುಭವ ಎಂಬುದನ್ನು ಕೇವಲ ಅನುಭವಿಸಿಯೇ ತಿಳಿಯಬೇಕು ಎಂದು ಹೇಳುತ್ತಾನೆ. ಮತ್ತೊಂದು ಕಡೆ ಆತ್ಮಜ್ಞಾನದ ಬಗ್ಗೆ ನುಡಿದಿರುವ ಆತನ ಉನ್ನತ ವಿಚಾರ ಸರಣಿಯನ್ನು ಗಮನಿಸಿ–

ಜ್ಯೋ ಗೂಂಗೇ ಕೇ ಸೈನ
ಕೋ ಗೂಂಗಾ ಹೀ ಪಹಚಾನ್
ತ್ಯೋಂ ಜ್ಞಾನೀ ಕೇ ಸುಕ್ಖ್
ಕೋ ಜ್ಞಾನೀ ಹೋಯ ಸೋ ಜಾನ್

ಮೂಕನ ಸಂಕೇತವನ್ನು ಮೂಕನಾದವನು ಮಾತ್ರ (ಬೇಗ) ತಿಳಿಯುವಂತೆ ಆತ್ಮಜ್ಞಾನಿಯ ಸುಖಾನಂದವನ್ನು ಕೇವಲ ಜ್ಞಾನಿಯೇ ತಿಳಿದುಕೊಳ್ಳುತ್ತಾನೆಂದು ಹೇಳಿದ್ದಾನೆ. ಕಬೀರ ಆತ್ಮಜ್ಞಾನದ ಬಗ್ಗೆ ಎಂಥ ನಿರ್ದಿಷ್ಟವಾದ ಉಪಮೆಯನ್ನು ನೀಡಿದ್ದಾನೆ ಎಂಬುದನ್ನು ನಾವು ಇಲ್ಲಿ ಕಾಣಬಹುದು.

ಮತ್ತೊಂದು ಕಡೆ ಜ್ಞಾನ ಮತ್ತು ಅಜ್ಞಾನವನ್ನು ಕುರಿತು ಕಬೀರ ಅರ್ಥವತ್ತಾದ ಮಾತೊಂದನ್ನು ಹೇಳಿರುವುದನ್ನು ಈ ಕೆಳಗಿನ ಸಾಲುಗಳಲ್ಲಿ ಉದಾಹರಿಸಬಹುದು–

ಭರೋ ಹೋಯ್ ಸೊ ರೀತ ಈ
ರೀತೋ ಹೋಯ ಭರಾಯ್
ರೀತೋ ಭರೋ ನ ಪಾಯಿಯೇ
ಅನುಭವ ನೋಯಿ ಕ ಹಾಯ್

–ತುಂಬಿದ್ದು ತೆರವಾಗಬಲ್ಲದು. ತೆರವಾದದ್ದು ತುಂಬಬಲ್ಲದು. ಆದರೆ ಒಂದೇ ಸಮಯದಲ್ಲಿ ಒಂದೇ ಕಡೆ ತುಂಬಿರುವುದೂ ತೆರವಾಗಿರುವುದೂ ಹೇಗೆ ಸಾಧ್ಯ ಎಂದು ಹೇಳುತ್ತಾ–ಜ್ಞಾನ ಮತ್ತು ಅಜ್ಞಾನ ಎರಡೂ ಒಂದೆಡೆ ನಿಲ್ಲಲಾರವು. ಈ ಎರಡರಲ್ಲಿ ಕೇವಲ ಒಂದಕ್ಕೆ ಮಾತ್ರ ಇಲ್ಲಿ ಎಡೆ ಇರುತ್ತದೆ ಎಂದು ನುಡಿದಿದ್ದಾನೆ. ಮಾನವನ ತಿಳಿವಿಗೆ ಎಂಥ ಜ್ಞಾನ ದೀವಿಟಿಗೆ ಇದು;

ಮತ್ತೊಂದು ಕಡೆ ಕಬೀರ ಭಕ್ತಿಯ ಬಗ್ಗೆ ಹೇಳುತ್ತ–

ದೇಖಾ ದೇಖೀ ಭಕ್ತಿ ಕಾ
ಕಬಹುಂ ನ ಚಡ್‌ಸೀ ರಂಗ್
ಬಿಪತಿ ಪಡೇಯೋಂ ಛಾಂಡಸೀ,
ಜ್ಯೋಂ ಕೇಂಚುಲೀ ಭುಜಂಗ್

ಭಕ್ತಿಯು ನೋಡಿ ಕಲಿಯುವ ವಸ್ತುವಲ್ಲ. ನೋಡುವುದರಿಂದ ಭಕ್ತಿಯ ರಂಗು ಏರುವುದೂ ಇಲ್ಲ. ಅದು ತನ್ನ ಹೃದಯಾಂತರಾಳದಿಂದ ಹುಟ್ಟುವ ಪ್ರೇರಣೆ ಆಗಬೇಕು. ನೋಡಿ ನಟಿಸುವ ಭಕ್ತಿ ಕೃತ್ರಿಮವಾದದ್ದು. ಹಾವು ತನ್ನ ಪೊರೆ ಬಿಸುಟು ಹೊರಟಂತೆ ಕಷ್ಟ ಬಂದಾಗ ಕೃತಕ ಭಕ್ತಿ ಸಡಿಲವಾಗುತ್ತದೆ. ಅರ್ಥಾತ್ ಮಾಯ ವಾಗುತ್ತದೆ ಎಂದಿದ್ದಾನೆ.

'ನಾನು' 'ನನ್ನದು' ಎಂಬ ಅಹಂ ಬಿಟ್ಟು 'ನೀನು' 'ನಿನ್ನದು' ಎಂಬ ವೈರಾಗ್ಯವನ್ನು ತಾಳು. ಆಗ ಮಾತ್ರ ನೀನು ಈಶ್ವರನನ್ನು ಕಾಣ ಬಲ್ಲೆ, ಭಕ್ತಿಯ ಉತ್ತುಂಗ ಶಿಖರವನ್ನು ಏರಬಲ್ಲೆ ಎಂದು ಮತ್ತೊಂದು ಕಡೆ ಬಹು ಸುಂದರವಾಗಿ ನುಡಿದಿದ್ದಾನೆ. ಎಲ್ಲ ಮಾರ್ಗಗಳಿಗಿಂತಲೂ ಭಕ್ತಿ ಮಾರ್ಗವೇ ಸರ್ವಶ್ರೇಷ್ಠವೆಂದು ಸಾರಿ ಜನರ ಕಣ್ಣು ತೆರೆಸಿದ್ದಾನೆ. ತನ್ನೊಡನೆ ಅವರನ್ನೂ ಭಕ್ತಿಮಾರ್ಗದತ್ತ ಕೊಂಡೊಯ್ದಿದ್ದಾನೆ. ಈ ರೀತಿ ಭಕ್ತಿಯ ಉತ್ತುಂಗ ಶಿಖರವನ್ನೇರಿದ ಕಬೀರ ಈಶನನ್ನು ಕಾಣುತ್ತಾನೆ. ಅವನನ್ನು ಪ್ರೇಮ ದಿಂದ ಭಜಿಸಿ ಕೃತಾರ್ಥನಾಗುತ್ತಾನೆ. ಪರಮಾತ್ಮ ನನ್ನು ಕುರಿತ ಆತನ ಭಕ್ತಿರಸ ತುಳುಕುವ ಈ ಪದ್ಯವನ್ನು ಓದಿ–

ಕಬೀರಾ ಹಮ್ ಗುರು ರಸ ಪಿಯಾ
ಬಾಕೀ ರಹೀ ನ ಛಾಕ್
ಪಾಕಾ ಕಲಸ ಕುಮಾರ ಕಾ
ಬಹುರಿ ನ ಚಢಸೀ ಚಾಕ್

ನಾನು ಈಶ್ವರ ಪ್ರೇಮವೆಂಬ ಅಮೃತವನ್ನು ಸವಿ ಸವಿದು ತೃಪ್ತಿ ಪಟ್ಟಿದ್ದೇನೆ. ಇನ್ನು ನನಗೆ ಬೇರೆ ಯಾವುದರ ಅವಶ್ಯಕತೆಯೂ ಇಲ್ಲ. ಕುಂಬಾರನ ಮಡಕೆ ಪಕ್ವ ಸ್ಥಿತಿಗೆ ಬಂದ ಮೇಲೆ ಪುನಃ ಅದನ್ನು ತಿಗರಿಯಲ್ಲಿಡುವುದುಂಟೇ ಎಂಬ ಕಬೀರನ ಮಾತು ಗಳಲ್ಲಿ ಎಂತಹ ಜೀವಧ್ವನಿ ಇದೆ ಎಂಬುದನ್ನು ಕಾಣಬಹುದು. ಕಟ್ಟಿಗೆಯ ಮಣಿಮಾಲೆಯನ್ನು ತಿರುಗಿಸುವುದು ನನಗೆ ಕಷ್ಟದ ಕೆಲಸವೆಂದು ನನ್ನ ಪ್ರತಿ ಶ್ವಾಸದಲ್ಲಿಯೂ ನಿನ್ನ ಸ್ಮರಣೆಯನ್ನು ಸೇರಿಸಿ ಬಿಟ್ಟಿದ್ದೇನೆ ಎಂದ ಕಬೀರನ ಮಾತುಗಳನ್ನು ಕೇಳಿ ದಾಗ ಅವು ಭಕ್ತಿಗೆ ಎಷ್ಟೊಂದು ಹತ್ತಿರವಾಗುತ್ತ ವೆಂಬುದನ್ನು ಕಾಣಬಹುದು. ಮತ್ತೊಂದು ಕಡೆ ಆತ ಪರಮಾತ್ಮನನ್ನು ಬೇಡುವ ಭಕ್ತಿಯ ರೀತಿ ಯನ್ನು ಇಲ್ಲಿ ನೋಡಿ–

ಸಾಹೇಬ್ ತುಮ್ ಜನಿ ವೀಸರೋ
ಲಾಖ ಲೋಗ ಲಗೀ ಜಾಹಿ
ಹಮ್‌ಸೇ ತುಮರೇ ಬಹುತ್ ಹೈಂ
ತುಮ್ ಸಮ ಹಮರೇ ನಾಹಿ

ಹೇ ಪ್ರಭೋ! ನಾನೊಬ್ಬ ಪತಿತನೂ ನೀನು ಮಾತ್ರ ನನ್ನನ್ನು ಪರಿಪಾಲಿಸಬೇಕು. ಏಕೆಂದರೆ ನನ್ನಂಥ ಭಕ್ತರು ನಿನಗೆ ಎಷ್ಟೋ ಮಂದಿ ಇರುವರು. ಆದರೆ ನನಗೆ ಮಾತ್ರ ನೀನು ಒಬ್ಬನೇ– ಎಂಬ ಕಬೀರನ ಮಾತುಗಳಲ್ಲಿ ಆತ ಪರಮಾತ್ಮ ನಲ್ಲಿಟ್ಟ ಪ್ರೀತಿಯ ದ್ಯೋತಕವನ್ನು ಗುರುತಿಸ ಬಹುದು.

ಮತ್ತೊಂದು ಕಡೆ ಮಾನವರ ಗುಣ ಸ್ವಭಾವ ವನ್ನು ಕುರಿತು ಬಹು ಸುಂದರವಾದ ವ್ಯಾಖ್ಯಾನ ವೊಂದನ್ನು ನೀಡುತ್ತಾನೆ: ಕೇಳಿ–

ಹಂಸಾ ಬಗುಲಾ ಏಕಸಾ
ಮಾನ ಸರೋವರ ಮಾಹಿ
ಬಗುಲಾ ಢಂಢೋರೇ ಮಾಛರೀ
ಹಂಸಾ ಮೋತೀ ಖಾಹಿ

–ಮಾನಸ ಸರೋವರದಲ್ಲಿ ನಿಂತ ಹಂಸ ಮತ್ತು ಬಕಪಕ್ಷಿ ಎರಡೂ ಒಂದೇ ಸಮಾನ ಕಂಡರೂ, ಮೀನನ್ನು ತಿನ್ನುವುದರಿಂದ ಬಕಪಕ್ಷಿಯನ್ನೂ, ಮುತ್ತನ್ನು ಹೆಕ್ಕುವುದರಿಂದ ಹಂಸವನ್ನೂ ಗುರು ತಿಸಬಹುದು. ಹೀಗೆ ನೋಡಲು ಒಂದೇ ರೀತಿ ಇದ್ದರೂ ಭಾವನೆಗಳು – ಸ್ವಭಾವಗಳು, ರೀತಿ ನೀತಿಗಳ ಮೂಲಕ ತಮ್ಮ ನಿಜವನ್ನು ತಾವು ತೋರಿಕೊಳ್ಳುತ್ತವೆ ಎಂದು ಮಾನವರನ್ನು ಹಂಸ ಮತ್ತು ಬಕಪಕ್ಷಿಗೆ ಹೋಲಿಸಿ ಹೇಳಿರುವುದನ್ನು ಇಲ್ಲಿ ನಾವು ಅರ್ಥೈಸಬಹುದಾಗಿದೆ.

ಮತ್ತೊಂದು ಕಡೆ ಮಾತು–ಕೃತಿಗಳ ಬಗ್ಗೆ ಕಬೀರ ಬಹು ಅರ್ಥವತ್ತಾಗಿ ನುಡಿದಿದ್ದಾನೆ.

ಕಥನೀ ಮೀಠೀ ಖಾಂಡಸೀ
ಕರ್ ನೀ ವಿಷಕೀ ಲೋಯ್
ಕಥನೀ ತಜಿ ಕರನೀ ಕರೈ
ವಿಷಸೇ ಅಮೃತ ಹೋಯ್

ಮಾತು ಸಕ್ಕರೆಯಂತೆ ಸಿಹಿ ಇದ್ದರೂ, ಆಚರಣೆ ವಿಷದಂತೆ ಕಹಿ. ಬರೀ ಬೊಗಳೆ ಮಾತುಗಳನ್ನು ಬಿಟ್ಟು ಅವನ್ನೆ ಮೌನವಾಗಿ ಕೃತಿಗಿಳಿಸಿದರೆ ಮಾತ್ರ ವಿಷವೂ ಅಮೃತವಾಗಬಲ್ಲದು ಎಂದಿದ್ದಾನೆ. ಬರಿದೇ ಬೊಗಳುವ ಜನರಿಗೆ ಎಂತಹ ಚಾಟಿಯ ಪೆಟ್ಟು!

ಗುರುವಿನ ಗರಿಮೆಯನ್ನು ಕೊಂಡಾಡುತ್ತ ಕಬೀರ ಹೀಗೆ ಹೇಳುತ್ತಾನೆ.

ಗುರುಗೋವಿಂದ ದೋಊ ಖಡೇ
ಕಾಕೇ ಲಾಗೌಂ ಪಾಂಯ್
ಬಲಿಹಾರೀ ಗುರೂ ಆಪನೇ
ಗೋವಿಂದ ದಿಯ್ ಬತಾಯ್

ಗುರು–ಗೋವಿಂದ ಇಬ್ಬರೂ ನನ್ನ ಮುಂದೆ ನಿಂತಿದ್ದಾರೆ. ಮೊದಲು ನಾನು ಯಾರಿಗೆ ನಮಸ್ಕರಿಸಲಿ? ಎಂಬ ತೊಡಕಿಗೆ ಬೀಳುತ್ತಾನೆ. ಕೂಡಲೇ ಅವನು ಹೇಳುತ್ತಾನೆ– ಹೇ ಗುರು! ನಿನಗೇ ನಾನು ಮೊದಲು ನಮಸ್ಕರಿಸುವೆ; ಏಕೆಂದರೆ ನೀನೇ ನನಗೆ ಗೋವಿಂದನ ಪರಿಚಯ ಮಾಡಿಸಿದೆ. ಆದ್ದರಿಂದ ಆ ಗೋವಿಂದ ಅಂದರೆ ಸಾಕ್ಷಾತ್ ಪರಮಾತ್ಮನಿಗಿಂತಲೂ ಗುರುವಾದ ನೀನೇ ನನಗೆ ಮುಖ್ಯ–ಎಂದು ನುಡಿದು ಗುರು ಮಹಿಮೆಯನ್ನು ಬಹು ಎತ್ತರಕ್ಕೆ ಏರಿಸಿದ್ದಾನೆ.

ನಿಜವಾದ ಸಂತಲಕ್ಷಣದ ಬಗ್ಗೆ ಅವರ ನಡೆ ನುಡಿ– ಸ್ವಭಾವಗಳ ಬಗ್ಗೆ ಕಬೀರ ತನ್ನ ಈ ಪದ್ಯದ ಮೂಲಕ ಹೇಳಿರುವ ಸೂಕ್ಷ್ಮಾರ್ಥವನ್ನು ಗಮನಿಸಿ–

ಬೃಚ್ಛ ಕಬಹುಂ ನಹಿ ಫಲ್
ಭಖೈಂ ನದೀ ನ ಸಂಚೈ ನೀರ್
ಪರಮಾರಥ ಕೇ ಕಾರನೇ
ಸಾಧುನ್‌ಧರಾ ಶರೀರ್

ಮರಗಳು ಎಂದಿಗೂ ತಮ್ಮ ಹಣ್ಣನ್ನು ತಾವೇ ತಿನ್ನುವುದಿಲ್ಲ. ನದಿಗಳು ತಮಗಾಗಿ ನೀರನ್ನೂ ಸಂಗ್ರಹಿಸಿಡುವುದಿಲ್ಲ; ಇದೇ ರೀತಿ ಸಾಧುಗಳು ಪರೋಪಕಾರಕ್ಕಾಗಿಯೇ ದೇಹವನ್ನು ಧರಿಸು ತ್ತಾರೆ–ಎಂದಿದ್ದಾನೆ. ನಿಜವಾದ ಸಂತ ಈ ರೀತಿ ಇರಬೇಕೆಂಬುದು ಕಬೀರನ ಅಭಿಮತ.

ಮನದಲ್ಲಿ ನಿಚ್ಚಳ ಭಕ್ತಿ ಇಲ್ಲದೇ ತಲೆ ಬೋಳಿಸಿ ವಿಭೂತಿ ಧರಿಸಿ ಕಾವಿ ಹಾಕಿ ಕೇವಲ ತೋರಿಕೆಗೆ ಭಕ್ತನಾಗಿ ಉದರಪೋಷಣೆಗಾಗಿ ವೈರಾಗ್ಯದ ಮಾತುಗಳನ್ನಾಡುವ ಢಾಂಭಿಕ ಜನರನ್ನು ಕುರಿತೇ ಕಬೀರ ಹೀಗೆ ಹೇಳಿರಬೇಕೇನೋ ಎನ್ನಿಸುತ್ತದೆ; ನೋಡಿ–

ಮೂಂಡ ಮುಂಡಾಯೇ ಹರಿಮಿಲೈಂ
ಸಬ್ ಕೋಯಿ ಲೇಹಿ ಮುಂಡಾಯ್
ಬಾರ್ ಬಾರ್ ಕೇ ಮೂಂಡನೇ
ಭೇಡ ನ ವೈಕುಂಠ ಜಾಯ್

ಕೇವಲ ತಲೆ ಬೋಳಿಸಿಕೊಳ್ಳುವುದರಿಂದಲೇ ಭಗವಂತ ಸಿಗುವುದಾದರೆ ಎಲ್ಲರೂ ಹಾಗೆಯೇ ಮಾಡಬಹುದು. ಬೇಕಾದಷ್ಟು ಸಲ ಬೋಳಿಸಿ ಕೊಂಡರೂ ಕುರಿ ಏಕೆ ವೈಕುಂಠಕ್ಕೆ ಹೋಗಲಿಲ್ಲ? ಎಂಬ ಕಬೀರನ ತೀಕ್ಷ್ಣ ವ್ಯಂಗ್ಯವನ್ನೂ ಆಡಂಬರದ ಭಕ್ತರನ್ನು ಕಂಡು ಕಟುವಾಗಿ ಎಚ್ಚರಿಸಿರುವುದನ್ನೂ ಇಲ್ಲಿ ಕಾಣುತ್ತೇವೆ.

ಧರ್‌ತೀ ಕರ್‌ತೇ ಏಕ ಪಗ್
ಸಮುಂದರ ಕರ್ ತೇ ಫಾಲ್

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಹಿಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಹಾಥನ ಪರಬತ ತೌಲತೇ,
ತಿನಹೂಂ ಖಾಯಾ ಕಾಲ್

–ಇಡೀ ಭೂಮಿಯನ್ನು ಒಂದೇ ಹೆಜ್ಜೆಯಿಂದ ದಾಟಿದವರನ್ನೂ, ಒಂದೇ ನೆಗೆತಕ್ಕೆ ಸಮುದ್ರವನ್ನು ಲಂಘಿಸಿದವರನ್ನೂ, ಕೈಯಿಂದಲೇ ಬೆಟ್ಟವನ್ನು ತೂಗತಕ್ಕ ಸಾಮರ್ಥ್ಯ ಇದ್ದವರನ್ನು ಸಹ ಕಾಲನು ತಿಂದು ಮುಗಿಸಿದ್ದಾನೆ. ಅಂದ ಮೇಲೆ ಸಾಧಾರಣ ಮಂದಿಯು ಮಾತೇನು ? – ಎಂದು ಹೇಳಿ ಕಾಲನು ಅರ್ಥಾತ್ ವಿಧಿಯು ಯಾರನ್ನೂ ಬಿಡದೆಂದೂ ಅದಕ್ಕಾಗಿ ಬದುಕಿರುವವರೆಗಾದರೂ ನಾಲ್ಕು ಜನರಿಗೆ ಬೇಕಾದವನಾಗಿ ಬದುಕಿ, ಪರಮಾತ್ಮನಿಗೆ ಪ್ರೀತಿಪಾತ್ರನಾಗು, ಸದಾ ದೇವರ ಸ್ಮರಣೆ ಮಾಡಿ ಮುಕ್ತಿಯನ್ನು ಪಡೆ– ಈ ಭವ ಬಂಧನದ ಹಂಗನ್ನು ತೊರೆ ಎಂದು ಹೇಳಿದ್ದಾನೆ. 'ಮಾನವ ಜನ್ಮ ದೊಡ್ಡದು ಇದನ್ನು ಹಾನಿ ಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ' ಎಂಬ ದಾಸವಾಣಿಯಂತೆ, ಇರುವೆ ಎಂಭತ್ತು ಕೋಟಿ ಜೀವರಾಶಿಗಳಲ್ಲಿ ಜನ್ಮ ತಳೆದು ಕೊನೆಗೆ ಈ ಮಾನವನಾಗಿ ಬರುತ್ತೀಯೆ; ಇಂಥ ಅಪರೂಪದ ಜನ್ಮ ಇದು. ಇದನ್ನು ಪಡೆದಾಗಲಾದರೂ ನೀನು ಪರಮಾತ್ಮನನ್ನು ಸೇವಿಸಿ ಕೃತಾರ್ಥನಾಗು-ಕೃತಪುಣ್ಯನಾಗು ಎಂದು ಕಬೀರ ಜೀವನ ಸಂದೇಶವನ್ನು ಸಾರಿದ್ದಾನೆ. ಈ ಮೂಲಕ ಆಧ್ಯಾತ್ಮಿಕ ಬದುಕಿಗೊಂದು ನಂಬುಗೆಯನ್ನು ಹುಟ್ಟಿಸಿದ್ದಾನೆ–ಇಂಬುಗೊಳಿಸಿದ್ದಾನೆ. ಈ ರೀತಿ ತನ್ನ ವಿಚಾರ ಸರಣಿಗಳನ್ನು ಸಮಾಜಕ್ಕಾಗಿ, ಜನರಿಗಾಗಿ, ಆತ್ಮೋದ್ಧಾರಕ್ಕಾಗಿ ನಿರಂತರವಾಗಿ ಧಾರೆ ಎರೆದು ಹಿಂದೂ ಮುಸಲ್ಮಾನರ ಭಾವೈಕ್ಯತೆಗೆ ಕಾರಣನಾಗಿ ತನ್ನ ಶಕ್ತಿಮೀರಿ ದುಡಿದಿರುವುದನ್ನು ಕಾಣಬಹುದು. ಹಿಂದೂ ಮುಸಲ್ಮಾನರು ವೈಷಮ್ಯ ಕಳೆದು ಸಹೋದರ ಭಾತೃತ್ವದಿಂದ ಸಮನ್ವಯವಾಗಿ ಬೆಳೆಯುವಂತೆ ಮಾಡಲು ಅವಿರತವಾಗಿ ಶ್ರಮಿಸಿದ ನಮ್ಮ ನಾಡವರಲ್ಲಿ ಕಬೀರನದು ಹೆಚ್ಚಿನ ಪಾಲು.

ಮುಸಲ್ಮಾನನಾದ ಇವನು ಹಿಂದೂ ಧರ್ಮವನ್ನು ಅನುಸರಿಸುತ್ತಿರುವುದನ್ನು ಕಂಡು ಮುಸಲ್ಮಾನ ಜನತೆ ಈತನನ್ನು ಧಿಕ್ಕರಿಸಿದ್ದನ್ನು ಆತ ತನ್ನ ಮಾತುಗಳಲ್ಲಿ ವ್ಯಕ್ತಪಡಿಸಿರುವುದನ್ನು ನಾವು ಕಾಣಬಹುದು. ಅಷ್ಟೇ ಅಲ್ಲದೆ ಆಗಿನ ಕಾಲದಲ್ಲಿ ಆಳ್ವಿಕೆಯಲ್ಲಿದ್ದ ಸಿಕಂದರ್ ಲೋಧಿಯು ಕಬೀರನ ಬಗ್ಗೆ ಕ್ರೋಧಗೊಂಡು ಆತನನ್ನು ಬಹುವಾಗಿ ಹಿಂಸಿಸಿದನು. ಆದರೂ ಕಬೀರ ತನ್ನ ಮನಸ್ಸನ್ನು ಎಷ್ಟೂ ಬದಲಿಸದೇ ಮತ್ತೂ ಪರಮಾತ್ಮನಲ್ಲಿ ಹೆಚ್ಚಿನ ಭಕ್ತಿಯನ್ನೂ, ಶ್ರೀ ರಾಮ ಸ್ಮರಣೆಯಲ್ಲಿ ಅವಿಚ್ಛಿನ್ನ ಆನಂದವನ್ನೂ ಕಾಣ ತೊಡಗಿದನು.

ಈ ಎಲ್ಲ ಕಾರಣಕ್ಕಾಗಿ ಆತನ ಮನಸ್ಸು ವಿಚ್ಛಿದ್ರಗೊಂಡು ಕೆಲವು ದಿನ ಶಾಂತಿ – ನೆಮ್ಮದಿಗಾಗಿ ಚಿಂತಿಸತೊಡಗಿತು. ಅಂತೆಯೇ ಕಬೀರ ತನ್ನ ಜೀವಿತದ ಕೊನೆ ದಿನಗಳಲ್ಲಿ ಕಾಶಿಯನ್ನು ತ್ಯಜಿಸಿ 'ಮಗಹರ್' ಎಂಬ ಹಳ್ಳಿಗೆ ಧಾವಿಸಿ ತನ್ನ 120 ವರ್ಷಗಳ ತುಂಬು ಜೀವನವನ್ನು ಶ್ರೀರಾಮನ ಸ್ಮರಣೆಯಲ್ಲಿಯೇ ಕಳೆದು ಕೊನೆಗೊಂದು ದಿನ ಮುಕ್ತಿ ಪಡೆದ - ಜೀವನ್ಮುಕ್ತನಾದ.

ಇತ್ತ ಉಸಿರು ದೇಹ ಪರಿತ್ಯಾಗ ಮಾಡಿದ ಕೂಡಲೇ ಹಿಂದೂ – ಮುಸಲ್ಮಾನರು ಈತನ ಶವಸಂಸ್ಕಾರಕ್ಕಾಗಿ ಮುಂದೆ ಬಂದರು. ಹಿಂದೂ ಧರ್ಮಾಚರಣೆಯುಳ್ಳವನಾದ್ದರಿಂದ ಕಬೀರನ ಶವವು ನಮಗೆ ಸೇರಬೇಕೆಂದು, ಹಿಂದುಗಳೂ, ಈತ ಮುಸಲ್ಮಾನನಾಗಿರುವುದರಿಂದ ಈ ಶವ ನಮಗೆ ಸೇರತಕ್ಕದ್ದೆಂದು ಮುಸಲ್ಮಾನರೂ ಕಚ್ಚಾಡತೊಡಗಿದರು. ಈ ಕಚ್ಚಾಟ ವಿಪರೀತಕ್ಕೇರಿ ಬಿಡಿಸಲಾರದ ಸಮಸ್ಯೆಯಾಗತೊಡಗಿದಾಗ "ಕಚ್ಚಾಡುತ್ತೀರೇಕೆ, ಶವದ ಬಟ್ಟೆ ತೆರೆದು ನೋಡಿ" ಎಂಬ ಅಶರೀರವಾಣಿ ಆಗಲು ಅದರಂತೆ ಎಲ್ಲರೂ ಕುತೂಹಲದಿಂದ ಶವದ ಬಟ್ಟೆ ತೆರೆದು ನೋಡಲಾಗಿ ಅಲ್ಲಿ ಕಬೀರನ ಮೃತ ದೇಹ ಮಾಯವಾಗಿ ಆ ಸ್ಥಳದಲ್ಲಿ ಪುಷ್ಪರಾಶಿ ಇದ್ದುದು ಕಂಡುಬಂತು. ಆಗ ಎರಡೂ ಧರ್ಮದವರೂ ಕಬೀರನ ಜ್ಞಾನ ಮಹಿಮೆಗೆ ಶರಣಾಗಿ ಆ ಹೂಗಳನ್ನು ಸಮನಾಗಿ ಹಂಚಿಕೊಂಡರು. ಹಿಂದೂಗಳು ತಮ್ಮ ಪಾಲಿನ ಈ ಪುಷ್ಪವನ್ನು ಅಗ್ನಿ ಸಂಸ್ಕಾರ ಮಾಡಿ ಅದರ ಭಸ್ಮವನ್ನು ಗಂಗಾನದಿಗೆ ಬಿಟ್ಟರು. ಮುಸಲ್ಮಾನರು ಆ ಪುಷ್ಪವನ್ನು ತಮ್ಮ ಪದ್ಧತಿಯಂತೆ ಹೂಳಿ ಸಮಾಧಿ ಕಟ್ಟಿಸಿ ಪೂಜಿಸತೊಡಗಿದರು.

ಈ ರೀತಿ ಕಬೀರ ಹಿಂದೂ ಮುಸಲ್ಮಾನರ ಭಾವೈಕ್ಯತೆಗೆ ನಾಂದಿಯಾಗಿ ಭರತ ಖಂಡದ ಸರ್ವ ಧರ್ಮ ಸಮ್ಮೇಲನಗಳ ಭದ್ರ ಬುನಾದಿಗೆ ಕಾರಣೀಭೂತರಾಗಿದ್ದಾರೆ. ತಾನು ಯಾವ ಧರ್ಮಕ್ಕೂ ಪಂಥಕ್ಕೂ ಸೇರದೇ ತನ್ಮೂಲಕ ಭಾರತದಲ್ಲಿ ವಿಶಾಲವಾಗಿ ಬೆಳೆದಿರುವ – ಬೆಳೆಯುತ್ತಿರುವ ಧಾರ್ಮಿಕ ಕ್ಷೇತ್ರಕ್ಕೆ ಮಹತ್ವಪೂರ್ಣವಾದ ಸೇವೆಯನ್ನು ಸಲ್ಲಿಸಿದ್ದಾರೆ. ಇಂತಹ ಪುಣ್ಯಾತ್ಮರನ್ನು ಕುರಿತೇ ಹಿರಿಯರು 'ಭಕ್ತಿ ಎಲ್ಲರ ಸೊತ್ತು, ಮಹಾಪುರುಷರು ಎಲ್ಲರ ಸಂಪತ್ತು' ಎಂದು ಹೇಳಿರಬೇಕು ಎನ್ನಿಸುತ್ತದೆ. ಈ ರೀತಿ ನಮ್ಮ, ನಿಮ್ಮ ನಾಡಿನ ಸಂಪತ್ತಾದ ಮಹಾಪುರುಷ ಕಬೀರರ ವಿಚಾರವನ್ನೂ, ಅವರು ನೀಡಿದ ಆತ್ಮೋದ್ಧಾರದ ಮಾತುಗಳನ್ನು, ಸಮಾಜ ವಿಮರ್ಶೆಯನ್ನೂ ಆ ಮೂಲಕ ಜೀವನ ಸಂದೇಶದೊಂದಿಗೆ ನಾಡಿನ ಧಾರ್ಮಿಕ ಕ್ಷೇತ್ರಕ್ಕೆ ಅವರು ನೀಡಿರುವ ಕೊಡುಗೆಯನ್ನು ನಾವು ನಮ್ಮವರು ಹೇಗೆ ಸ್ವೀಕರಿಸುತ್ತೇವೆ–ಅಚರಿಸುತ್ತೇವೆ ಎಂಬುದು ಈಗ ಅತ್ಯಂತ ಮುಖ್ಯ ಹಾಗೂ ಪ್ರಾಮುಖ್ಯವೆಂಬುದನ್ನು ನಾವು ಮರೆಯಬಾರದು.

(16ನೇ ಪುಟದಿಂದ)

ತೆಗೆದುಕೊಂಡು "ಇದು ಮಹಾಭೂಮಿಪರ ಬಿಂಕವನೊಡೆದ ಧನುವೇ, ಶ್ರೋತೃರೆ" ಎನ್ನುತ್ತ ಬಿಲ್ಲನ್ನೆತ್ತಿ, ಬಾಗಿ ಒತ್ತಿದ. ಕೊರಳಿಗೆ ತಿರುವನ್ನು ತೊಡಿಸಿದ. ತಿರುವನು ಹೊಯ್ದು, ಕಿವಿವರೆಗೆ ಸೆಳೆದೊಯ್ದು "ಇದು ಹದವಿಲ್ಲಲಾ, ಬಿಲು ಹೊಯ್ದುದೆಕಟಾ, ಬರಿದೆ ಹೆದರಿತು ಮಗಧಾಧಿಗಳು ಕೈದೆಗೆದರು" ನನಗೆ ಹೆಸರು ಬರುವುದಕ್ಕೇ ಅವರು ಈ ಸುಲಭದ ಕೆಲಸಕ್ಕೆ ಹೆದರಿರಬೇಕು ಎನ್ನುತ್ತ, ಪಂಚಬಾಣದಿಂದ, (ಯಂತ್ರದ ಹೊಳಹನ್ನೀಕ್ಷಿಸಿ) ಕ್ಷಣದಲ್ಲಿ ಯಂತ್ರಕ್ಕೆ ಬಾಣವನ್ನು ತಾಗಿಸಿದ. ಒಡನೆ "ಜಾಗು ಧಣಧಣ ಪೂತು ಕಾರ್ಮುಕ ಯೋಗಸಿದ್ಧನೆ ಮಝುರೆ ಕೋದಂಡಾಗಮ ತ್ರಿಪುರಾರಿ" ಎನ್ನುತ್ತ ಜನಸ್ತೋಮ ಹೊಗಳಿತು. ದೇವತೆಗಳು ಹೂಮಳೆ ಕರೆದರು. ಯುವತಿಯರು ಹರ್ಷದಿಂದ ಕುಣಿದಾಡಿದರು. ನೆರೆದಿದ್ದ ರಾಜರ ಮುಖ ಕಿರಿದಾಯಿತು. ಮಂಗಳವಾದ್ಯಗಳು ಮೊಳಗಿದವು. ಆಗ "ಮಹಿಳಾ ಜನದ ಮಹೌಳಿಯ ಮುತ್ತು, ಕುಸುಮಾಯುಧನ ಭಟ್ಟನ ಮತ್ತಗಜ" ವಾದ ದ್ರೌಪದಿ ದಂಡಿಗೆಯಲ್ಲಿ ಕುಳಿತು "ಕೊಲ ಕೊಲಗು, ಮನ್ಮಥನ ಹೊಗರಿಟ್ಟಲಗು ಬರುತಿದೆ ಸಾರು ಸಾರು" ಎನ್ನುತ್ತ ಭಟ್ಟರು ದಾರಿಮಾಡಿಕೊಡುತ್ತಿದ್ದಂತೆಯೇ ಅರ್ಜುನನ ಬಳಿಬಂದಳು. ಈ ಹೊತ್ತಿನ ದ್ರೌಪದಿಯ ಚಿತ್ರ ಮೂಲಭಾರತಕ್ಕಿಂತ ಬಹಳ ಸೊಗಸಾಗಿದ್ದು, ದ್ರೌಪದಿಯ ಮನದೊಳಗೆ ಉದಿಸಿದ ಭಾವನೆಗಳ ತಾಕಲಾಟವನ್ನು ಸಮರ್ಥವಾಗಿ ಚಿತ್ರಿಸುತ್ತದೆ. ಅರ್ಜುನನ ಬಳಿಬಂದ ದ್ರೌಪದಿಗೆ, ಆತನ ಸಾಮೀಪ್ಯದಿಂದ ಹರುಷ, ಲಜ್ಜೆಗಳು ಮೂಡಿ ಮನದೊಳಗೆ ಒಂದು ಬಗೆಯ ಕಳವಳ ಉಂಟಾಯಿತು. "ಬಹಳ ಲಜ್ಜಾಭರದ ಭಯದಲಿ ಮೇಲುದಜಾರೆ, ಜೋಡಿ ನಿರಿಮ ನಡುನಡುಗಿ ತರುಣಿ ನಿಜತನು ಪರಿಮಳದಲರೆ ಹೊರೆದ ಹೂವಿನದಂಡೆಯನು ನಿಜವರನ ಕೊರಳಲಿ ಹಾಯ್ಕಿದಳು." ದ್ರೌಪದಿಯೊಂದಿಗೆ ನಿಂತ ಅರ್ಜುನನ ಚಿತ್ರವಿದು: "ಕೊಗಳ ಹೂವಿನ ದಂಡೆಯಲಿ, ನಿಜಕರದ ಭಾರಿಯ ಧನುವಿನಲಿ ತನುಪರಿಮಳದ ನಿಟ್ಟೆಸಳುಗಂಗಳ ಕೆಲದ ಯುವತಿಯಲಿ ನರನ ಪರಿ ಹೊಸತಾಯ್ತು ಹೊತ್ತನು ಹರನ ಹಗೆ ಹಾರುವಿಕೆಯನು." ನಂತರ ದ್ರೌಪದಿಯ ವಿವಾಹ ವೈಭವಯುತವಾಗಿ ನಡೆಯಿತು.

# ತಿ.ತಿ.ದೇ. ಬೋರ್ಡ್ ತೀರ್ಮಾನಗಳು 14-8-86

ಗಣ್ಯವ್ಯಕ್ತಿಗಳ ಪ್ರತ್ಯೇಕ ಪ್ರವೇಶದ ಪಾಸುಗಳ ಬಗ್ಗೆ ಬೋರ್ಡು ದೀರ್ಘವಾಗಿ ಚರ್ಚಿಸಿದ ನಂತರ ಇಂತಹ ಪಾಸುಗಳ ಸಂಖ್ಯೆ ಅತಿ ಕಡಮೆಯೆಂದೂ, ಸ್ವಯಂಪ್ರೇರಿತ ಸಂಯಮದಿಂದ ಇದನ್ನು ಮತ್ತೂ ಕಡಮೆ ಮಾಡಬಹುದೆಂದೂ ತೀರ್ಮಾನಿಸಲಾಯಿತು. ಆಗಮ್ಯರ (ಅತ್ಯಂತ ಗಣ್ಯವ್ಯಕ್ತಿಗಳು) ಬಗ್ಗೆ ಸಾಂಪ್ರದಾಯಿಕ ವಿಧಿ ವಿಧಾನಗಳೇ ಮುಂದುವರೆಯಬೇಕೆಂದೂ ತೀರ್ಮಾನಿಸಲಾಯಿತು.

* * * *

ಇಂಡೋನೇಷಿಯಾದ ಬಾಲಿ ದ್ವೀಪಗಳ ಸ್ವಸ್ತಿಕ ಧರ್ಮ ಟ್ರಸ್ಟ್‌ನವರು ನಿರ್ಮಿಸಲಿರುವ ಶ್ರೀ ನಾರಾಯಣ, ಶ್ರೀ ವೆಂಕಟೇಶ್ವರ, ಶ್ರೀ ಶಿವ ಉಮಾಪತಿ ದೇವಾಲಯಗಳಿಗಾಗಿ ಸಾಲದ ರೂಪದ ಧನಸಹಾಯ ನೀಡಬೇಕೆಂಬ ಆ ಟ್ರಸ್ಟ್‌ನ ಅಭ್ಯರ್ಥನೆಯ ಬಗ್ಗೆ ಚರ್ಚಿಸಿ, ವಿದೇಶೀ ದೇವಾಲಯ ನಿರ್ಮಾಣದಲ್ಲಿ ತಿ. ತಿ. ದೇ.ಗಳ ನೆರವು ಯೋಜನೆಯ ವಿವರಗಳನ್ನು ಅವರಿಗೆ ನೀಡಬೇಕೆಂದೂ, ಅದಕ್ಕೆ ತಕ್ಕ ಒಪ್ಪಂದ ಪತ್ರವನ್ನು ತಯಾರಿಸಬೇಕೆಂದೂ, ವಿದೇಶೀ ದೇವಾಲಯಗಳ ಸಾಲದ ಮರುಪಾವತಿಯನ್ನು ಕಾಲದಿಂದಕಾಲಕ್ಕೆ ಗಮನಿಸುತ್ತ ಬೋರ್ಡ್‌ನ ಪರಿಶೀಲನೆಗೆ ತರಬೇಕೆಂದೂ ತೀರ್ಮಾನಿಸಲಾಯಿತು.

* * * *

ಚಿಕಾಗೋನಲ್ಲಿಯ ಶ್ರೀ ವೆಂಕಟೇಶ್ವರ ಹಾಗೂ ಶ್ರೀರಾಮ ದೇವಾಲಯಗಳಿಗಾಗಿ ವಿಗ್ರಹಗಳನ್ನು ತಯಾರಿಸಿ ನೀಡುವಿಕೆಯನ್ನು ಅನುಮೋದಿಸಲಾಯಿತು.

* * * * *

ಆಸ್ಟ್ರೇಲಿಯಾದ ರಾಮ್ಸ್‌ಗೇಟ್‌ನ ಶ್ರೀ ವೆಂಕಟೇಶ್ವರ ದೇವಾಲಯ ಸಂಸ್ಥೆಗೆ 6 ಲಕ್ಷ ರೂ.ಗಳ ಸಾಲರೂಪವಾದ ನೆರವನ್ನು ಸರ್ಕಾರದ ಗಮನಕ್ಕೆ ತರಲು ತೀರ್ಮಾನಿಸಲಾಯಿತು.

* * * * *

ಸನಾತನ ಧರ್ಮ ಪ್ರಸಾರಕ್ಕಾಗಿ ಕೋದಾಡ ಸಮಿತಿಯಲ್ಲಿ ನಡೆಯುತ್ತಿರುವ ಕೆಲಸದಂತೆಯೇ ಪಶ್ಚಿಮ ಗೋದಾವರಿಯ ಗಣಪವರ ಹಾಗೂ ಚಿತ್ತೂರುಜಿಲ್ಲೆಯ ಪುತ್ತೂರು ಸಮಿತಿಗಳಲ್ಲೂ ಧರ್ಮಪ್ರಸಾರ ಕಾರ್ಯಗಳನ್ನು ಆರಂಭಿಸಬೇಕೆಂದೂ,ಈ ಕೆಲಸಗಳ ಮೇಲುಸ್ತುವಾರಿಯನ್ನು ಶ್ರೀ ರಾಮಕೃಷ್ಣಾನಂದಸ್ವಾಮಿಗಳು (ಗಂಡಿಕ್ಷೇತ್ರ) ಹಾಗೂ ನಡಿಗಡ್ಡಪಾಳೆಂನ ಶ್ರೀಮನ್ನಾರಾಯಣ ರಾಮಾನುಜಸ್ವಾಮಿಗಳು (ಚಿನ್ನ ಜೀಯರ್) ಅವರಿಗೂ ಕ್ರಮವಾಗಿ ಒಪ್ಪಿಸಬೇಕೆಂದು ತೀರ್ಮಾನಿಸಲಾಯಿತು. ಗುಂಟೂರು ಜಿಲ್ಲೆಯ ಪಲ್ಲಿಪಟ್ಲ ಗ್ರಾಮವನ್ನು ಈ ಯೋಜನೆಯನ್ವಯ ದತ್ತು ತೆಗೆದುಕೊಂಡು, ಕೋದಾಡ ಸಮಿತಿಯ ಕಾರ್ಯಕ್ರಮಗಳು ಮುಗಿದ ಕೂಡಲೇ, ಏಲೂರಿನ ಶ್ರೀ ಲಕ್ಷ್ಮಣ ಯತೀಂದ್ರರ ಮೇಲುಸ್ತುವಾರಿಯಲ್ಲಿ ಧರ್ಮಪ್ರಸಾರ ಕಾರ್ಯಕ್ರಮಗಳನ್ನು ಆರಂಭಿಸಬೇಕೆಂದೂ ತೀರ್ಮಾನಿಸಲಾಯಿತು.

* * * *

ತಾಳ್ಳಪಾಕ ಗ್ರಾಮದ ಅಭಿವೃದ್ಧಿಯಲ್ಲಿ ಅನ್ನಮಾಚಾರ್ಯ ಪ್ರಚಾರ ಪರಿಶೋಧನಾ ಕೇಂದ್ರದ ಪರಿಶ್ರಮವನ್ನು ಶ್ಲಾಘಿಸಿದರೂ, ಅದರ ಕಾರ್ಯಯೋಜನೆಯಲ್ಲಿ ಬೆರೆಯಲು ಆಗದೆಂದು ತೀರ್ಮಾನಿಸುತ್ತ, ಕೇಂದ್ರಕ್ಕೆ ಸಹಕಾರವನ್ನು– ಸಾಹಿತ್ಯ, ಕ್ಯಾಸೆಟ್ ಮುಂತಾದುವನ್ನು ನೀಡುವುದರ ಮೂಲಕ – ನೀಡಲು ತೀರ್ಮಾನಿಸಲಾಯಿತು.

* * * *

ಹೈದರಾಬಾದ್ ಬಳಿಯ ಗಡ್ಡಿ ಅನ್ನಾರಂನ ಸರೂರ್‌ನಗರ್, ಗುಂಟೂರ್ ಜಿಲ್ಲೆಯ ನಿಜಾಂಪಟ್ನಂ, ಚಿತ್ತೂರು ಜಿಲ್ಲೆಯ ತಳಾರಿಪಲ್ಲೆಗಳಲ್ಲಿನ ತಿ. ತಿ. ದೇ. ಕಲ್ಯಾಣಮಂಟಪಗಳ ಅವಶ್ಯಕತೆಯನ್ನೂ, ಈ ಮೂರೂ ಗ್ರಾಮಗಳು ವಿವಿಧ ಕಾರಣಗಳಿಂದ ಹಿಂದುಳಿದಿರುವುದನ್ನೂ ಗಮನಿಸುತ್ತ, ಇಲ್ಲಿ ಹಿಂದೂ ಧರ್ಮದ ಕಾರ್ಯಕ್ರಮಗಳ ಅಗತ್ಯವನ್ನು ಮನಗಂಡು, ಇಲ್ಲಿನ ಯಾವುದೇ ಸ್ಥಳೀಯ ವಂತಿಗೆಯೂ ಇಲ್ಲದಂತೆ ತಿ. ತಿ. ದೇ. ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ಸರ್ಕಾರಕ್ಕೆ ಶಿಫಾರಸುಮಾಡಲು ತೀರ್ಮಾನಿಸಲಾಯಿತು.

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು 20-8-86

ತಿರುಮಲೆಯ ತಿ.ತಿ.ದೇ ಕ್ಯಾಂಟೀನ್ ಕಾಂಪ್ಲೆಕ್ಸ್‌ನ ಬಾಯಿಲರ್‌ಗಳಿಗಾಗಿ 1986–87 ರಲ್ಲಿ ಡೀಸೆಲ್ ಆಯಿಲ್, ಇಂಜಿನ್ ಆಯಿಲ್, ಹಾಗೂ ಅಡಿಗೆ ಅನಿಲಗಳಿಗಾಗಿ ಕ್ರಮವಾಗಿ ಹತ್ತು ಲಕ್ಷ, 2 ಲಕ್ಷ, ಹಾಗೂ 12 ಲಕ್ಷ ರೂಗಳನ್ನು ಮಂಜೂರು ಮಾಡಲಾಯಿತು.

* * * *

ತಿರುಮಲೆಯ ಅನ್ನಪೂರ್ಣ ಕೆಟರರ್ಸ್ ಅವರು ನಡೆಸುತ್ತಿರುವ ಭೋಜನ ಫಲಹಾರ ಶಾಲೆಯ ಲೀಸ್ ಗಡುವನ್ನು 10 ಶತಾಂಶ ಹೆಚ್ಚಿನ ಬಾಡಿಗೆಯೊಂದಿಗೆ 1–4–86 ರಿಂದ ಒಂದು ವರ್ಷಕ್ಕಾಗಿ ಮುಂದುವರಿಸಲು ತೀರ್ಮಾನಿಸಲಾಯಿತು.

* * * *

ಮೊದಲಿಗೆ ದಿನವೊಂದಕ್ಕೆ 5000 ಮಂದಿಗೆ ಮಾತ್ರ ದೊರೆಯುತ್ತಿದ್ದ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯ ಭೋಜನಾವಕಾಶವನ್ನು ಬೇಸಗೆಯಲ್ಲಿ ಹೆಚ್ಚಿದ ಯಾತ್ರಿಕ ಸಂದಣಿಯನ್ನು ಗಮನದಲ್ಲಿರಿಸಿಕೊಂಡು 1–4–86 ರಿಂದ 30–6–86 ವರೆಗೆ ಮತ್ತು ಅದರಾಚೆಗೆ ದಿನಂಪ್ರತಿ ಹತ್ತುಸಾವಿರ ಮಂದಿಗೆ ಏರಿಸಲಾಗಿರುವುದನ್ನು ಅನುಮೋದಿಸಲಾಯಿತು.

* * * * *

ಶಾಸ್ತ್ರ, ವೇದಗಳ ಉನ್ನತ ಮಟ್ಟದ ಅಧ್ಯಯನ ಯೋಜನೆಯ ಕಾಲಾವಧಿಯನ್ನು ಈಗಿರುವ ವಿದ್ಯಾರ್ಥಿಗಳು ತಮ್ಮ ಶಿಕ್ಷಣಾವಧಿಯನ್ನು ಪೂರ್ಣಗೊಳಿಸುವವರೆಗೆ ಮುಂದುವರಿಸಲು ತೀರ್ಮಾನಿಸುತ್ತ, ಅದನ್ನು ಮತ್ತೂ ಮುಂದುವರಿಸಲು ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* * * * *

ಶ್ರೀ ವೆಂಕಟೇಶ್ವರ ಬಧಿರ ಮೂಗ ಪಾಠಶಾಲೆಯ ಅಧ್ಯಾಪಕರುಗಳಿಗೆ ಮೂಗ ಕಿವುಡರ ಶಿಕ್ಷಣಕ್ಕೆ ನೆರವೀಯುವ ಅಂಶಕಾಲಿಕ ತರಬೇತಿಯನ್ನು ನೀಡಲು ತೀರ್ಮಾನಿಸಲಾಯಿತು.

* * * * *

ವರಂಗಲ್ ಜಿಲ್ಲೆಯಲ್ಲಿ ತಿ.ತಿ.ದೇ. ಗಳು ಮೂಗ ಬಧಿರ ಪಾಠಶಾಲೆಯೊಂದನ್ನು ನಿರ್ಮಿಸಿ ನಡೆಸಲು ಆರ್ಥಿಕ ನೆರವು ನೀಡುವ ಯೋಜನೆಯನ್ನು ಅಂಗೀಕರಿಸಲು ತೀರ್ಮಾನಿಸಿ, ಸರ್ಕಾರದ ಅನುಮತಿಗಾಗಿ ಬರೆಯಲು ತೀರ್ಮಾನಿಸಲಾಯಿತು.

* * * *

ವಿವಿಧ ಸ್ಥಳಗಳಲ್ಲಿರುವ ತಿ.ತಿ.ದೇ. ಕಲ್ಯಾಣ ಮಂಟಪಗಳನ್ನು ಮದುವೆ, ಧಾರ್ಮಿಕ, ಸಾಂಸ್ಕೃತಿಕ, ಕಾರ್ಯಕ್ರಮಗಳಿಗೆ ಈಗಿರುವ ಬಾಡಿಗೆಯ ದರಗಳಲ್ಲೇ, ಮೊದಲ ಅವಕಾಶ ನೀಡಬೇಕೆಂದೂ, ವಾಣಿಜ್ಯ ಉದ್ದೇಶಗಳಿಗಾಗಿ ಬಾಡಿಗೆ ಎರಡು ಪಟ್ಟು ಹೆಚ್ಚುಗೊಳಿಸಬೇಕೆಂದೂ, ವಿವಾದಾತ್ಮಕವಾದ ಹಾಗೂ ರಾಜಕೀಯ ಕಾರಣಗಳಿಗಾಗಿ ನೀಡಲೇ ಬಾರದೆಂದೂ ತೀರ್ಮಾನಿಸಲಾಯಿತು.

* * * *



## ಕೋಲಾರದಲ್ಲಿ ಗಣೇಶೋತ್ಸವ

ಕೋಲಾರದಲ್ಲಿ 7–9–86 ರಿಂದ 14–9–86 ರ ವರೆಗೆ ಸ್ಥಳೀಯ ಹಳೆಯ ಮಾಧ್ಯಮಿಕ ಶಾಲೆಯ ಮೈದಾನದಲ್ಲಿ ಸಾರ್ವಜನಿಕ ಗಣೇಶೋತ್ಸವವು ಸಡಗರ ಸಂಭ್ರಮಗಳಿಂದ ನಡೆಯಿತು

ಸುಮಾರು 5½ ಅಡಿ ಎತ್ತರದ ಬಲಮುರಿ ಗಣೇಶ ವಿಗ್ರಹವನ್ನು ಸೆಪ್ಟೆಂಬರ್ 7 ರಂದು ಪ್ರತಿಷ್ಠಾಪಿಸಲಾಯಿತು. ಪ್ರತಿದಿನವೂ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳೂ, ಧಾರ್ಮಿಕ ಉಪನ್ಯಾಸಗಳೂ, ಹರಿಕಥೆಗಳೂ ಏರ್ಪಾಡಾಗಿದ್ದು ಪ್ರಭಾತ ಕಲಾವಿದರಿಂದ ಕರ್ನಾಟಕ ವೈಭವ ಸಂಗೀತ ನೃತ್ಯರೂಪಕವೂ, ಶ್ರೀ ಶಿವಮೊಗ್ಗ ಸುಬ್ಬಣ್ಣ ವೃಂದದವರಿಂದ ಭಕ್ತಿ ಸಂಗೀತ ಕಾರ್ಯಕ್ರಮಗಳೂ ಅತಿಹೆಚ್ಚು ಜನರನ್ನು ಆಕರ್ಷಿಸಿದವು. ಸಂತ ಶ್ರೀ ಹರಿಹರಾನಂದಸ್ವಾಮಿಗಳು ಪ್ರತಿದಿನವೂ ಧರ್ಮದ ಅಗತ್ಯವನ್ನೂ, ಧಾರ್ಮಿಕತೆಯ ಲಾಭಗಳನ್ನೂ ಕುರಿತು ಮನಮುಟ್ಟುವ ಉದಾಹರಣೆಗಳೊಂದಿಗೆ ಉಪನ್ಯಾಸ ನೀಡಿದರು.



ಸಾಮೂಹಿಕ ವಿವಾಹಗಳು. —ಚಿತ್ರ: ಶ್ರೀ ಗುರು.

14–9–86 ರಂದು ಸಮಿತಿ ಸಾಮೂಹಿಕ ವಿವಾಹಗಳನ್ನು ಏರ್ಪಡಿಸಿದ್ದು, ಹನ್ನೊಂದು ಜೊತೆ ಮದುವೆಗಳು ನಡೆದವು. ಸಂತ ಶ್ರೀ ಹರಿಹರಾನಂದರೂ, ಕರ್ನಾಟಕದ ರೇಷ್ಮೆ, ಪಶು ಸಂಗೋಪನೆ ಹಾಗೂ ಮೀನುಗಾರಿಕೆ ಮಂತ್ರಿ ಶ್ರೀ ಕೃಷ್ಣಾರೆಡ್ಡಿಯವರೂ ವಧೂವರರನ್ನು ಆಶೀರ್ವದಿಸಿದರು. ಸಾಮೂಹಿಕ ಭೋಜನದ ನಂತರ ತಾಳಮೇಳ ಕೋಲಾಟಗಳೊಂದಿಗೆ ಗಣಪತಿ ವಿಸರ್ಜನೆ ನಡೆಯಿತು.

## ೧೯೮೬ ರ ಬ್ರಹ್ಮೋತ್ಸವ

1986 ರ ಅಕ್ಟೋಬರ 4 ರಿಂದ 9 ದಿನಗಳ ಕಾಲ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು ನಡೆಯಲಿವೆ.

ಬ್ರಹ್ಮೋತ್ಸವದ ಬಹುಮುಖ್ಯದಿನಗಳೆಂದರೆ ಗರುಡ ಸೇವೆಯ ದಿನ (ಅಕ್ಟೋಬರ 8) ರಥೋತ್ಸವದ ದಿನ (ಅಕ್ಟೋಬರ–11) ಹಾಗೂ ಚಕ್ರಸ್ನಾನ (ಅಕ್ಟೋಬರ 12).

ಬ್ರಹ್ಮೋತ್ಸವದ ಆರ್ಜಿತ ಸೇವೆಯಲ್ಲಿ ಭಾಗವಹಿಸುವ ಬಯಕೆಯುಳ್ಳವರು ತತ್ಸಂಬಂಧಿ ಶುಲ್ಕ ರೂ 1000/– ಕೊಟ್ಟು ಭಾಗವಹಿಸಬಹುದು. ಮಿಕ್ಕ ಆರ್ಜಿತ ಸೇವೆಗಳು – ಕಲ್ಯಾಣೋತ್ಸವ, ತಿರುಪ್ಪಾವಡಾ, ಸಹಸ್ರ ಕಲಶಾಭಿಷೇಕ ಮೊದಲಾದವು ಈ ಅವಧಿಯಲ್ಲಿ ನಡೆಯುವುದಿಲ್ಲ. ಜೊತೆಗೇ ಅಕ್ಟೋಬರ 2 ರಿಂದ 12 ರ ವರೆಗೆ ತಿರುಮಲೆಯಲ್ಲಿ ವಸತಿಯ ಮುಂಗಡ ಕಾಯ್ದಿರಿ–ಸುವಿಕೆಯನ್ನು ಮನ್ನಾ ಮಾಡಲಾಗಿದೆ. ವಸತಿಯನ್ನು ಮೊದಲು ಬಂದವರಿಗೆ ಮೊದಲು ಸೂತ್ರದಲ್ಲಿ ಯಾತ್ರಿಕರಿಗೆ ನೀಡಲಾಗುವುದು.

## ಅನ್ನಮಾಚಾರ್ಯ ಪ್ರಾಜೆಕ್ಟಿನ ವಿನಾಯಕ ಚತುರ್ಥಿ

ಅನ್ನಮಾಚಾರ್ಯ ಕಲಾಮಂದಿರದಲ್ಲಿ ಗಣೇಶ ಚತುರ್ಥಿಯನ್ನು ಆಚರಿಸಲಾಯಿತು. ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ಗಣಪತಿಯ ಮಹತ್ವವನ್ನು ಕುರಿತು ಮಾತನಾಡಿದರು.

ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದ ಶ್ರೀ ಬಾಲಕೃಷ್ಣಪ್ರಸಾದ ಹಾಗೂ ಸಂಗೀತ ಕಲಾಶಾಲೆಯ ಪ್ರಾಂಶುಪಾಲ ಶ್ರೀ ಡಿ. ಪಶುಪತಿ ಅವರುಗಳು ಗಣಪತಿಯ ಬಗೆಗಿನ ತ್ಯಾಗರಾಜ ಮುತ್ತುಸ್ವಾಮಿ ದೀಕ್ಷಿತರ ಕೃತಿಗಳನ್ನೂ, ಅನ್ನಮಾಚಾರ್ಯರ ಕೃತಿಗಳನ್ನೂ ಹಾಡಿದರು.

## ಭಾರತ ರಾಷ್ಟ್ರಪತಿಗಳಿಂದ ಸನ್ಮಾನಿತರಾದ ಡಾ॥ ಎನ್. ಎಸ್. ರಾಮಾನುಜತಾತಾಚಾರ್ಯ



ಶ್ರೀ ಉ॥ ವೇ॥ ಎನ್. ಎಸ್. ರಾಮಾನುಜ ತಾತಾಚಾರ್ಯರು ಇದೇ ಆಗಸ್ಟ್ 15 1986 ರ ಸ್ವಾತಂತ್ರ್ಯದಿನೋತ್ಸವದಂದು ಭಾರತ ರಾಷ್ಟ್ರಪತಿಗಳಿಂದ ಸನ್ಮಾನಿತರಾಗಿರುವುದು ಶಾಸ್ತ್ರಜ್ಞರಿಗೂ ಸಂಸ್ಕೃತಜ್ಞರಿಗೂ ಸಂತೋಷವನ್ನುಂಟುಮಾಡುವಂತಹುದಾಗಿದೆ.

ತಮಿಳುನಾಡು ರಾಜ್ಯದ 'ನಾವಲ್ಪಾಕ' ಎಂಬ ಹೆಸರಿನ ಅಗ್ರಹಾರದಲ್ಲಿ ಜನಿಸಿದ ಶ್ರೀಯುತರು ವೇದ ನ್ಯಾಯ ಮೀಮಾಂಸಾ ವೇದಾಂತಶಾಸ್ತ್ರ ನಿಷ್ಣಾತರಾದ ತಮ್ಮ ತಂದೆ ಶ್ರೀ ಕೃಷ್ಣಸ್ವಾಮಿ ತಾತಾಚಾರ್ಯರ, ಉತ್ತಮೂರು ಶ್ರೀ ವೀರರಾಘವಾಚಾರ್ಯರ ಹಾಗೂ ಅಯ್ಯಾ ಶ್ರೀ ದೇವನಾಥತಾತಾಚಾರ್ಯರ ಬಳಿಯೂ, ಮೊದಲಿಗೆ ತಿರುಮಲ–ತಿರುಪತಿ ದೇವಸ್ಥಾನದಿಂದ ನಡೆಸಲ್ಪಡುತ್ತಿರುವ ಶ್ರೀವೆಂಕಟೇಶ್ವರ ಪ್ರಾಚ್ಯಕಲಾಶಾಲೆಯಲ್ಲೂ, ಅನಂತರ ಶ್ರೀ ಪೆರುಂಬುದೂರು ಸಂಸ್ಕೃತ ಕಲಾಶಾಲೆಯಲ್ಲೂ, ಹಾಗೂ ಸ್ವಗ್ರಾಮದಲ್ಲೂ ನ್ಯಾಯ, ಮೀಮಾಂಸಾ, ವ್ಯಾಕರಣ, ವೇದಾಂತಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ತತ್ತ್ವಚಿಂತಾಮಣಿಗೆ ವಿಮರ್ಶಗ್ರಂಥವನ್ನು ಬರೆದು

ವಾರಣಾಸಿಯ ಸಂಪೂರ್ಣಾನಂದ ವಿಶ್ವವಿದ್ಯಾಲಯದಿಂದ "ವಿದ್ಯಾವಾರಿಧಿ" ಎಂಬ ಉಪಾಧಿಯನ್ನು ಪಡೆದಿರುತ್ತಾರೆ. ಮದ್ರಾಸು ಸರ್ಕಾರೀ ಪುಸ್ತಕಾಲಯದಲ್ಲೂ ಪೂನಾದಲ್ಲಿರುವ ಡೆಕ್ಕನ್ ಕಲಾಶಾಲೆಯಲ್ಲೂ ಕೆಲಸಮಾಡಿ ಪ್ರಸ್ತುತ ತಿರುಪತಿ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದಲ್ಲಿ ಪ್ರಾಂಶುಪಾಲರಾಗಿರುತ್ತಾರೆ. ಇವರಿಂದ ರಚಿತವಾಗಿರುವ 'ಜ್ಞಾಪಕ ಸಂಗ್ರಹ ವಿವೃತಿಃ', 'ದೀಪಿಕಾ ಪ್ರಕಾಶಿಕಾವ್ಯಾಖ್ಯಾ ಬಾಲಪ್ರಿಯಾ', 'ಪಂಚಲಕ್ಷಣೀ ಗದಾಧರೀ ವ್ಯಾಖ್ಯಾಬಾಲಬೋಧಿನೀ', 'ಗೋಪಾಲ ಸಹಸ್ರನಾಮ ವ್ಯಾಖ್ಯಾ', 'ಭಗವದ್ಗುಣ ರತ್ನಪೇಟಿಕಾ', ತತ್ತ್ವಚಿಂತಾಮಣಿಯ ಎರಡು ವ್ಯಾಖ್ಯಾನಗಳ ಎರಡು ಭಾಗಗಳು ಪ್ರಕಟವಾಗಿ ವಿದ್ವಜ್ಜನ ಮನ್ನಣೆ ಪಡೆದಿವೆ. ಬೇರೆ ಬೇರೆ ತಾಳೆಗರಿಗಳಿಂದ ಸಂಪಾದಿಸಲ್ಪಟ್ಟ ಹದಿನೈದು ಕೃತಿಗಳು ಪ್ರಕಟವಾಗಿದ್ದು, ಚತುರ್ದಶ ಲಕ್ಷಣೀವ್ಯಾಖ್ಯಾ, 'ಸಿದ್ಧಾಂತ ಲಕ್ಷಣ ವ್ಯಾಖ್ಯಾ 'ಪಕ್ಷತಾ ವ್ಯಾಖ್ಯಾ' ಸಧ್ಯದಲ್ಲೇ ಪ್ರಕಟವಾಗಲಿವೆ. ನಲವತ್ತಕ್ಕೂ ಹೆಚ್ಚು ಸಂಶೋಧನ ಬರಹಗಳು ಅನೇಕ ಸಂಶೋಧನ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

ವಿದ್ವತ್ಸಭೆಗಳಲ್ಲೂ ವಾಕ್ಯಾರ್ಥಗೋಷ್ಠಿಗಳಲ್ಲೂ ಭಾಗವಹಿಸಿ ಸ್ವಾಮಿಗಳ, ವಿದ್ವಜ್ಜನರ ಪ್ರಶಂಸೆಗೆ ಪಾತ್ರರಾಗಿರುವ ಶ್ರೀಯುತರು ಅನೇಕ ಪುರಸ್ಕಾರಗಳನ್ನು ಪಡೆದಿರುತ್ತಾರೆ. ವಿದ್ವತ್ಸಭೆಗಳಲ್ಲಿ "ಶಾಸ್ತ್ರರತ್ನಾಕರಃ", "ತರ್ಕವಾಚಸ್ಪತಿಃ", "ಚತುಃಶಾಸ್ತ್ರಪ್ರವೀಣಃ" ಎಂಬ ಬಿರುದುಗಳನ್ನೂ ಪಡೆದಿರುತ್ತಾರೆ.

ಇಂತಹ ವಿದ್ವದ್ವರೇಣ್ಯರಿಗೆ ಭಕ್ತವರದನಾದ ಶ್ರೀ ವೆಂಕಟೇಶ್ವರನು ಶಾಸ್ತ್ರ ಸಂಪ್ರದಾಯ ಪ್ರವರ್ತನೆಗೆ ಅನುಗುಣವಾದ ಆಯುರಾರೋಗ್ಯಾದಿಗಳನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇವೆ.

**ಶ್ರೀ ಎಂ.ಎಲ್. ನರಸಿಂಹಮೂರ್ತಿ**

**ಮುಂದಿನ ಸಂಚಿಕೆಯಲ್ಲಿ .... .... ....**

**ಸಪ್ತಗಿರಿ. — ನವಂಬರ್ 1986**

**ಕನಕದಾಸರ ಕೀರ್ತನೆಗಳಲ್ಲಿ ದಾಸತ್ವ**
– ಡಾ ಹೊಸಬೆಟ್ಟು ಸೀತಾರಾಮಾಚಾರ್ಯ

**ಗಂಗಾ ಮನೋಹಾರಿಣಿ**
– ವಿದ್ವಾನ್ ಬ.ನ. ಗುಂಡೂರಾವ್

**ಜೈನಪಂಥೀಯ ಭಾಗವತ, ಭಾರತ**
– ಡಾ॥ ಎನ್. ಅನಂತರಂಗಾಚಾರ್ಯ

**ಸತಿ ಶೀಲಾ**
– ವಿದ್ವಾನ್ ಬಿ. ಬಾಲಗಣಪತಿಭಟ್ಟ

**ಗಂಗಾದೇವಿ**
– ಹನುಮಂತಾಚಾರ್ಯ ಮಣ್ಣೂರ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ : ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ನವಂಬರ್ 1986

| | | |
|---|---|---|
| 1. | ಶನಿವಾರ | ತಿರುಮಲೆಯಲ್ಲಿ ದೀಪಾವಳೀ ಆಸ್ಥಾನ |
| 2. | ಭಾನುವಾರ | ಕೇದಾರ ವ್ರತ |
| 4. | ಮಂಗಳವಾರ | ತಿರುಮಲೆನಂಬಿ ಶಾತ್ತುಮೊರೆ |
| 6. | ಗುರುವಾರ | ಮಣವಾಳ ಮಹಾಮುನಿ ಶಾತ್ತುಮೊರೆ |
| 9. | ಭಾನುವಾರ | ಪಿಳ್ಳೈ ಲೋಕಾಚಾರ್ಯ, ಪೊಯ್‌ಗೈ ಆಳ್ವಾರ್, ಭೂದತ್ತಾಳ್ವಾರ್‌ರವರ ವರ್ಷತಿರುನಕ್ಷತ್ರ ವೇದಾಂತದೇಶಿಕರ ಶಾತ್ತುಮೊರೆ, ತಿರುಮಲೆಯಲ್ಲಿ ಪುಷ್ಪಯಾಗ. |
| 10. | ಸೋಮವಾರ | ಪೇಯಾಳ್ವಾರ್ ವರ್ಷತಿರುನಕ್ಷತ್ರ |
| 12. | ಬುಧವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ |
| 16. | ಭಾನುವಾರ | ,, ,, ತೆಪ್ಪೋತ್ಸವ ಸಮಾಪ್ತಿ<br>ಕಾರ್ತೀಕ ಪರ್ವ ದೀಪೋತ್ಸವ |
| 27. | ಗುರುವಾರ | ತಿರುಚಾನೂರು ಶ್ರೀ ಪದ್ಮಾವತೀದೇವಿ ಬ್ರಹ್ಮೋತ್ಸವ ಅಂಕುರಾರ್ಪಣೆ |
| 28. | ಶುಕ್ರವಾರ | ,, ,, ಧ್ವಜಾರೋಹಣ. |

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

